

ಂಪಿ ಕನ್ನಡ ವಿಶ್ವವಿದ್ಯಾಲಯಕ್ಕೆ ಸಲ್ಲಿಸಿದ ಎಂ.ಫಿಲ್. ಪದವಿಯ ಸಂಪ್ರಬಂಧ

# “ಸಿದ್ಧಲಿಂಗಯ್ಯನವರ ಕಾವ್ಯಗಳಲ್ಲಿ ಭಾಷೆ : ಒಂದು ಅಧ್ಯಯನ”


**ಸಂಶೋಧನ ವಿದ್ಯಾರ್ಥಿ**

**ಮಂಜುಳಾ.ಎಂ.**

**ಮಾರ್ಗದರ್ಶಕರು**

**ಡಾ||ಕೆ.ಪಿ.ಭಟ್**





ಎಂ.ವಿ.ಸಿ. ಸ್ನಾತಕೋತ್ತರ ಸಂಶೋಧನ ಕೇಂದ್ರ

ಬಿ.ಎಂ.ಶ್ರೀ ಸ್ಮಾರಕ ಪ್ರತಿಷ್ಠಾನ

ಬೆಂಗಳೂರು.

೨೦೦೮.




ಹಂಪಿ ಕನ್ನಡ ವಿಶ್ವವಿದ್ಯಾಲಯಕ್ಕೆ ಸಲ್ಲಿಸಿದ ಎಂ.ಫಿಲ್. ಪದವಿಯ ಸಂಪ್ರಬಂಧ

# "ಸಿದ್ಧಲಿಂಗಯ್ಯನವರ ಕಾವ್ಯಗಳಲ್ಲಿ ಭಾಷೆ : ಒಂದು ಅಧ್ಯಯನ"



ಸಂಶೋಧನ ವಿದ್ಯಾರ್ಥಿ

ಮಂಜುಳಾ.ಎಂ.

ಮಾರ್ಗದರ್ಶಕರು

ಡಾ||ಕೆ.ಪಿ.ಭಟ್






ಎಂ.ವಿ.ಸಿ. ಸ್ನಾತಕೋತ್ತರ ಸಂಶೋಧನ ಕೇಂದ್ರ

ಬಿ.ಎಂ.ಶ್ರೀ ಸ್ಮಾರಕ ಪ್ರತಿಷ್ಠಾನ

ಬೆಂಗಳೂರು.

2008.

# ಅಭ್ಯರ್ಥಿಯ ಪ್ರಮಾಣ ಪತ್ರ

ಬಿ.ಎಂ.ಶ್ರೀ ಸ್ಮಾರಕ, ಪ್ರತಿಷ್ಠಾನ, ಬೆಂಗಳೂರು, ಎಂ.ವಿ.ಸೀ ಸ್ನಾತಕೋತ್ತರ ಸಂಶೋಧನಾ ಕೇಂದ್ರದ ಮೂಲಕ ಹಂಪಿ ಕನ್ನಡ ವಿಶ್ವವಿದ್ಯಾಲಯಕ್ಕೆ ೨೦೦೭–೨೦೦೮ ಸಾಲಿನ ಎಂ.ಫಿಲ್ ಪದವಿಗಾಗಿ ***"ಸಿದ್ಧಲಿಂಗಯ್ಯನವರ ಕಾವ್ಯಗಳಲ್ಲಿ ಭಾಷೆ: ಒಂದು ಅಧ್ಯಯನ"*** ಎಂಬ ಸಂಪ್ರಬಂಧವನ್ನು ಡಾ॥ಕೆ.ಪಿ.ಭಟ್ ರವರು ಮಾರ್ಗದರ್ಶನದಲ್ಲಿ ಸಿದ್ದಪಡಿಸಿ ಸಲ್ಲಿಸುತ್ತಿದ್ದೇನೆ.

ಈ ಸಂ.ಪ್ರಬಂಧ ನನ್ನ ಸ್ವಂತ ಬರವಣಿಗೆಯಾಗಿದ್ದು ಇದರ ಯಾವುದೇ ಭಾಗವನ್ನು ಈವರೆಗೆ ಬೇರೆಲ್ಲೂ ಪ್ರಕಟಪಡಿಸಿಲ್ಲ ಮತ್ತು ಬೇರೆ ಯಾವುದೇ ಪದವಿಗಾಗಿ ಸಲ್ಲಿಸಿಲ್ಲ ಎಂದು ಈ ಮೂಲಕ ದೃಢೀಕರಿಸುತ್ತೇನೆ.

**ದಿನಾಂಕ:** ೨೦-೧೦-೦೮

**ಸ್ಥಳ :** ಬೆಂಗಳೂರು

**ಅಭ್ಯರ್ಥಿಯ ಸಹಿ**

ಮಂಜುಳಾ.ಎಂ.

**(ಮಂಜುಳಾ.ಎಂ.)**

# ಮಾರ್ಗದರ್ಶಕರ ಪ್ರಮಾಣ ಪತ್ರ

ಬಿ.ಎಂ.ಶ್ರೀ. ಸ್ಮಾರಕ ಪ್ರತಿಷ್ಠಾನ, ಬೆಂಗಳೂರಿನ ಎಂ.ವಿ.ಸೀ. ಸ್ನಾತಕೋತ್ತರ ಸಂಶೋಧನ ಕೇಂದ್ರದ ಮೂಲಕ ಹಂಪಿ ಕನ್ನಡ ವಿಶ್ವವಿದ್ಯಾಲಯಕ್ಕೆ ೨೦೦೭–೨೦೦೮ ಸಾಲಿನ ಎಂ.ಫಿಲ್ ಪದವಿಗಾಗಿ **"ಸಿದ್ಧಲಿಂಗಯ್ಯನವರ ಕಾವ್ಯಗಳಲ್ಲಿ ಭಾಷೆ: ಒಂದು ಅಧ್ಯಯನ"** ಎಂಬ ಸಂಪ್ರಬಂಧವನ್ನು ಮಂಜುಳಾ.ಎಂ. ಅವರು ನನ್ನ ಮಾರ್ಗದರ್ಶನದಲ್ಲಿ ಸಿದ್ಧಪಡಿಸಿದ್ದಾರೆ.

ಈ ಸಂಪ್ರಬಂಧ ವಿದ್ಯಾರ್ಥಿಯ ಸ್ವಂತ ಬರವಣಿಗೆಯಾಗಿದ್ದು ಇದರ ಯಾವುದೇ ಭಾಗವನ್ನು ಈ ವರೆಗೆ ಬೇರೆಲ್ಲೂ ಪ್ರಕಟಪಡಿಸಿಲ್ಲ ಮತ್ತು ಬೇರೆ ಯಾವುದೇ ಪದವಿಗಾಗಿ ಸಲ್ಲಿಸಿಲ್ಲ ಎಂದು ಈ ಮೂಲಕ ದೃಢೀಕರಿಸುತ್ತೇನೆ.

**ದಿನಾಂಕ:** ೨೦/೧೦/೨೦೦೮

**ಸ್ಥಳ :** ಬೆಂಗಳೂರು [illegible]

**ಮಾರ್ಗದರ್ಶನಕರು**

**(ಡಾ॥ ಕೆ.ಪಿ.ಭಟ್)**

# ಪರಿವಿಡಿ

# ಅಧ್ಯಾಯ - ೧

**ಪೀಠಿಕೆ**

ಅಧ್ಯಯನದ ಉದ್ದೇಶ ಮತ್ತು ವ್ಯಾಪ್ತಿ

ಅ) ದಲಿತ ಕಾವ್ಯಕ್ಕೆ ಪ್ರೇರಣೆಗಳು

ಆ) ದಲಿತ ಕವಿಯಾಗಿ ಸಿದ್ದಲಿಂಗಯ್ಯ

# ಅಧ್ಯಾಯ - ೧

**ಪೀಠಿಕೆ:**

ಕನ್ನಡ ಸಾಹಿತ್ಯ ಚರಿತ್ರೆಯಲ್ಲಿ ಹಲವು ಸಾಹಿತ್ಯ ಪ್ರಕಾರಗಳನ್ನು ಕಾಣಬಹುದು. ನವೋದಯ, ಪ್ರಗತಿಶೀಲ ನವ್ಯ ದಲಿತ-ಬಂಡಾಯ ಎಂದು ಗುರ್ತಿಸಿಕೊಂಡಿರುವ ಸಾಹಿತ್ಯಗಳು ತಮ್ಮದೆ ಆದ ಸ್ಥಾನಮಾನಗಳನ್ನು ಗಳಿಸಿಕೊಂಡಿವೆ, ಹಾಗೆ ದಲಿತ ಸಾಹಿತ್ಯವು ಕೂಡ ಒಂದು ಸಾಹಿತ್ಯ ಪ್ರಕಾರವಾಗಿ ಬೆಳೆದು ನಿಂತಿದೆ.

ದಲಿತ ಸಾಹಿತ್ಯಕ್ಕೆ ಅತ್ಯಂತ ಮಹತ್ವದ ಸ್ಥಾನ, ಪರಂಪರೆ ಇದೆ ಎಂಬುವುದನ್ನು ಅಲ್ಲಗೆಳೆಯಲಾಗದು, ಕನ್ನಡ ಸಾಹಿತ್ಯ ಚರಿತ್ರೆಯಲ್ಲಿ ಈಗ ವಿಶಿಷ್ಟ ಪ್ರಕಾರವಾಗಿ ಗುರುತಿಸಲ್ಪಟ್ಟ ದಲಿತ ಸಾಹಿತ್ಯ ತನ್ನದೆ ಆದ ವಿಶಿಷ್ಟತೆಯನ್ನು ಪಡೆದುಕೊಂಡಿದೆ.

ದಲಿತರಾದವರು ಹುಟ್ಟಿನಿಂದ 'ಅಸ್ಪ್ರುಶ್ಯರಾಗಿದ್ದು, ದಲಿತ ದೇವರುಗಳ ಪೂಜೆ, ದಲಿತ ಸಂಸ್ಕೃತಿಯ ಮನೋಧರ್ಮದ ನೆಲೆಯಲ್ಲಿ ದಲಿತಾನುಭವದ ಹಿನ್ನಲೆಯಿಂದ ಅಭಿವ್ಯಕ್ತಿಗೊಂಡ ಸಾಹಿತ್ಯವನ್ನು ದಲಿತ ಸಾಹಿತ್ಯ ಎಂದು ಕರೆಯಬಹುದು.

ಇದರಿಂದ ದಲಿತ-ದಲಿತೇತರ ಸಾಹಿತ್ಯಕ್ಕೂ ಪರಸ್ಪರ ಜೀವನಾನುಭವ ಮತ್ತು ಕಾವ್ಯಾನುಭವದಲ್ಲಿ ವ್ಯತ್ಯಾಸ ತಿಳಿದು ಬರುತ್ತದೆ ಎಂಬುವುದು ಖಚಿತ.

ದಲಿತರ ಬದುಕು ಮತ್ತು ಸಂಸ್ಕೃತಿಯನ್ನು ಕುರಿತು ದಲಿತ ಲೇಖಕರೇ ಬರೆದಿರುವ ದಲಿತಾನುಭವ, ನೋವು-ನಲಿವು, ಆಂತರ್ಯದ ತುಡಿತ-ಮಿಡಿತ ಹಾಗೂ ಪ್ರಮೋದತೆಯ ಅಭಿವ್ಯಕ್ತಿಯ ಕಾವ್ಯದ ಚಿತ್ತಲಾಲಿತ್ಯ, ದಲಿತೇತರು ಕಂಡು ಬರೆದ ಸಾಹಿತ್ಯಕ್ಕೂ ಅಂತರ ಇದ್ದೇ ಇರುತ್ತದೆ ಎಂಬುದನ್ನು ಯಾರು ಬೇಕಾದರೂ ಒಪ್ಪುವಂತದೆ.

ಇಂತಹ ಸಾಹಿತ್ಯವನ್ನು ಹಲವರು ಬರೆದು ದಲಿತ ಸಾಹಿತ್ಯಕ್ಕೆ ತನ್ನದೆ ಆದ ಶ್ರೇಷ್ಠತೆಯನ್ನು ತಂದು ಕೊಟ್ಟಿರುವುದು ಉತ್ತಮ ಸಂಗತಿ.

ದಲಿತ ಸಾಹಿತ್ಯ ಹುಟ್ಟಿದ ಮೂರನೆಯ ದಶಕದ ಅಂಚಿನಲ್ಲಿ ಅದು ಹಲ್ಲು ಕಿತ್ತಿದ ಹಾವಿನಂತಾಗಿತ್ತೆಂಬುದು ನಿಜವಾದ ಮಾತು, ಆದರೆ ಆರಂಭದಿಂದ ಆಮೇಲೆ ನಡೆದು ಬಂದ ದಾರಿಯನ್ನು ಗಮನಿಸಿದರೆ ಅದೊಂದು ಚಾರಿತ್ರಿಕವಾದ ಸಂಕೇತ ಎಂದು ಹೇಳಬಹುದು.

ಹೊಸಗನ್ನಡ ಸಾಹಿತ್ಯ ಸಂದರ್ಭದಲ್ಲಿ ದಲಿತ ಚಲವಳಿ ಕಾವ್ಯದ ಮೂಲಕ, ಕಾವ್ಯ ಚಳವಳಿಯ ಮೂಲ ಅಡಿಪಾಯ ಎಂದೇ ತಿಳಿಯಬೇಕು, ಅನಂತರ ಕತೆ, ನಾಟಕ ಕಾದಂಬರಿ ಸಂಶೋಧನೆ, ಆತ್ಮಕತೆ ರಚನೆಗೆ ಸ್ಫೂರ್ತಿ ಚಾಲನೆ ಸಿಕ್ಕಿದ್ದು ಹೇಳಲಾರದ ಮಾತು.

"ಕರ್ನಾಟಕದಲ್ಲಿ ದಲಿತ ಸಾಹಿತ್ಯ ರಚನೆಯಾಗುತ್ತಿದ್ದರೂ ಅದನ್ನು ದಲಿತ ಸಾಹಿತ್ಯ ಎಂದು ಕರೆಯುತ್ತಿರಲಿಲ್ಲ. 'ದಲಿತ' ಎಂಬ ಪದ ಬಳಕೆ ಮಹಾರಾಷ್ಟ್ರದಿಂದಲೇ ವಲಸೆ ಬಂದಿದೆ ಎಂಬುದು ನಿಜ, 'ದಲ' ಎಂಬುದು ಸಂಸ್ಕೃತದ ಪದ 'ದಲ ಎಂದರೆ ತುಂಡು, ಚೂರು, ಭಾಗ, ಸೈನ್ಯ ಎಂಬರ್ಥ ಈ ಪದ ಇಟ್ಟುಕೊಂಡು ಕೆಲವರು ದಲಿತ ಎಂದರೆ ದಮನಕ್ಕೆ ಒಳಗಾದವರು, ಅಸ್ಪೃಶ್ಯರು ಎಂದು ಹೇಳುತ್ತಾರೆ."[೧]

ಇವರ ಪರವಾಗಿ ಆರಂಭವಾದ ಚಳುವಳಿಯೇ 'ದಲಿತ ಚಳುವಳಿ ಆಗಿದ್ದರೂ ಅದನ್ನು ಈ ಹೆಸರಿನಿಂದ ಕರೆದಿರಲಿಲ್ಲ, ಯಾವಾಗ ಅಲ್ಲಲ್ಲಿ ಮಾಧ್ಯಮಗಳಲ್ಲಿ 'ದಲಿತ ಪದ ಬಳಕೆ ಆರಂಭವಾಯಿತು ಅವಾಗ ಸಹಜವಾಗಿ ಎಲ್ಲೆಡೆ ಇದು ಬಳಕೆಯಲ್ಲಿದೆ.

ಇಂದು ಕನ್ನಡ ದಲಿತ ಸಾಹಿತ್ಯದಲ್ಲಿ ಕಾವ್ಯ ಕತೆ, ಕಾದಂಬರಿಯ, ನಾಟಕ, ಸಂಶೋಧನೆ, ವಿಮರ್ಶೆ, ಆತ್ಮಕತೆ ಮೊದಲಾದ ಪ್ರಕಾರಗಳಲ್ಲಿ ವಿಪುಲವಾಗಿ ಸಾಹಿತ್ಯ ಸೃಷ್ಟಿಯಾಗುತ್ತಿದೆ ೧೯೭೪ ರಿಂದ ೨೦೦೨ ರವರೆಗೆ ಪ್ರತಿಯೊಂದು ಪ್ರಕಾರದಲ್ಲಿ ದಲಿತ ಸಾಹಿತ್ಯ ಹೆಚ್ಚು ಕೃಷಿ ಮಾಡತೊಡಗಿದ್ದಾರೆ.

ದಲಿತ ಕವಿ ಎಂದೆ ಪ್ರಸಿದ್ಧವಾಗಿರುವ ಸಿದ್ಧಲಿಂಗಯ್ಯನವರು ದಲಿತ ಸಾಹಿತ್ಯಕ್ಕೆ ಒಂದು ಹೊಸ ತಿರುವನ್ನು ಕೊಟ್ಟಿದ್ದಾರೆ.

ದಲಿತ ವರ್ಗದ ಒಬ್ಬ ಸಾಮಾನ್ಯ ವ್ಯಕ್ತಿಯಾಗಿ ಹಲವು ರೀತಿಯಲ್ಲಿ ನೋವು-ನಲಿವುಗಳನ್ನು ಅನುಭವಿಸಿ ಒಂದು ವರ್ಗದ ವ್ಯಕ್ತಿ ಆ ವರ್ಗದವರು ಅನುಭವಿಸುವ ದುಃಖ ದುಮ್ಮಾನಗಳನ್ನೇ ತಮ್ಮ ಕಾವ್ಯದ ವಸ್ತುವಾಗಿದ್ದು ಕೊಂಡು ಶ್ರೇಷ್ಠವಾದ ಪ್ರಸಿದ್ಧಿಯನ್ನು ಪಡೆದಿದ್ದಾರೆ.

ಗ್ರಾಮ್ಯ ಭಾಷೆ ಮತ್ತು ಶಿಷ್ಟ ಭಾಷೆ ಎರಡನ್ನು ವಿಪುಲವಾಗಿ ಬಳಸಿಕೊಂಡಿದ್ದಾರೆ. ಇವರ ಕವನಗಳಲ್ಲಿ ಪ್ರತ್ಯೇಕತೆ ಮೂಲವು ಇಡೀ ಕವಿಯ ಬರಹದ ಉದ್ದಕ್ಕೂ ಕೂಡ ತಾಗಿಸಿಕೊಳ್ಳುತ್ತದೆ.

ಸಾಹಿತ್ಯದ ಪ್ರಕಾರಗಳಲ್ಲಿ ಎರಡು ಬಗೆಯನ್ನು ಗುರ್ತಿಸಿದ ಹಾಗೆ ಭಾಷೆಯಲ್ಲಿಯೂ ಕೂಡ ಎರಡು ರೀತಿಯನ್ನು ಕಾಣಬಹುದು.

ಅ) ಆಡುಭಾಷೆ

ಆ) ಶಿಷ್ಟ ಭಾಷೆ

ಈ ಎರಡು ಭಾಷೆಯನ್ನು ಕವಿ ಬಳಸಿಕೊಂಡು ಹೀಗೆ ಕಾವ್ಯಕಷ್ಟೆ ಸ್ಫೂರ್ತಿಯನ್ನು ತಂದಿದ್ದಾರೆ ಎಂಬುವುದು ಈ ಸಂಪ್ರಬಂಧದ ಅಧ್ಯಯನವನ್ನು ಮುನ್ನಡಿಸಲಾಗಿದೆ.

## ಅಧ್ಯಯನ ಉದ್ದೇಶ ಮತ್ತು ವ್ಯಾಪ್ತಿ

ಕನ್ನಡ ಸಾಹಿತ್ಯದ ಕಾವ್ಯ ಲೋಕವನ್ನು ನಾವು ಅವಲೋಕಿಸಿದಾಗ ೧೦ನೇ ಶತಮಾನದ ಪಂಪನಿಂದ ಹಿಡಿದು ೨೧ನೇ ಶತಮಾದ ಈಗಿನ ಕವಿಗಳವರಗೆ ಕಾವ್ಯವು ಅನೇಕ ರೀತಿಯಲ್ಲಿ ಹೊಸತನವನ್ನು ಪಡೆದುಕೊಂಡು ಬಂದಿದೆ. ಶತಮಾನಕ್ಕೊಮ್ಮೆಯೋ ಅಥವಾ ಎರಡು ಮೂರು ಶತಮಾನಗಳಿಗೊಮ್ಮೆಯೋ ಬದಲಾವಣೆಯ ಹಾದಿಯನ್ನು ಹಿಡಿಯುತ್ತಿದ್ದ ಹಳೆಗನ್ನಡ ಕಾವ್ಯ ಧೋರಣೆ ೨೦ನೇ ಶತಮಾನದ ಹೊಸಗನ್ನಡದ ಸಂದರ್ಭದಲ್ಲಿ ಅನತಿಕಾಲದಲ್ಲೇ ಬದಲಾಗಿರುವುದನ್ನು ಕಾಣಬಹುದು.

ಸಿದ್ಧಲಿಂಗಯ್ಯನವರ ಕಾವ್ಯಗಳ ವಿಶೇಷವಾಗಿ ದಲಿತರ ನೋವು ದುಃಖ-ದುಮ್ಮಾನಗಳ ಬಗ್ಗೆ ಕಾವ್ಯಕ್ಕೋಸ್ಕರ ಪದಗಳ ಬಳಕೆಯನ್ನು ತಂದಿರುವುದು ಭಾಷೆಯ ವೈಶಿಷ್ಟ್ಯವಾಗಿದೆ, ಅವರ ಕವನಗಳಲ್ಲಿ ಆಡುಭಾಷೆ, ಶಿಷ್ಟ ಎರಡನ್ನೂ ಬಳಸಿಕೊಂಡು ಕಾವ್ಯಕ್ಕೆ ಹೊಸ ಮೆರುಗನ್ನು ತಂದು ಕೊಟ್ಟಿರುವುದು ಕವನಗಳ ಹೊಸ ರೀತಿಯ ಅಧ್ಯಯನ ಎಂದೇ ಹೇಳಬಹುದು.

ಸಿದ್ಧಲಿಂಗಯ್ಯನವರ ಕಾವ್ಯಗಳಲ್ಲಿ ಭಾಷೆ ಒಂದು ಅಧ್ಯಯನ ಎಂಬ ಶಿರ್ಷಿಕೆಗೆ ತಕ್ಕಂತೆ ಕವಿ ತನ್ನ ಕವನಗಳಲ್ಲಿ ಭಾಷೆಯನ್ನು ಹೇಗೆ ಬಳಸಿಕೊಂಡಿದ್ದಾರೆ ಎಂಬುವುದನ್ನು ಪ್ರಸ್ತುತ ಪಡಿಸುವುದೇ ನನ್ನ ಆಯ್ಕೆ ವಿಷಯದ ವಸ್ತುವಾಗಿದೆ.

ಹಾಗಾದರೆ ಕಾವ್ಯಗಳಲ್ಲಿ ಭಾಷೆ ಹೇಗಿದೆ ಎಂಬುವುದನ್ನು ತಿಳಿಯುವುದರ ಮುನ್ನವೆ ಭಾಷೆ ಎಂದರೆ ಏನು ಎಂಬುವುದನ್ನು ಅನೇಕ ಪ್ರಸಿದ್ಧವಿದ್ವಾಂಸರ ಹೇಳಿಕೆಗಳಿಂದ ತಿಳಿದು ಬರುತ್ತದೆ.

ಭಾಷೆ ಒಂದು ಮಾಧ್ಯಮ, ಭಾಷೆ ಒಂದು ಸಂವಹನ ಎಂದು ಎಲ್ಲಾರಿಗೂ ತಿಳಿದಿರುವ ವಿಷಯ ಅದನ್ನು ಹೇಗೆ ಬಳಸಬೇಕು, ಯಾವ ಸಂದರ್ಭದಲ್ಲಿ ಯಾವ-ಯಾವ ಭಾಷಾ ನಿಯಮಗಳನ್ನು ಬಳಸಬೇಕು ಎಂಬುವುದು ಮುಖ್ಯವಾದ ವಿಷಯ.

ಒಟ್ಟಾರೆಯಾಗಿ ಈ ಎರಡು ವ್ಯಾಖ್ಯೆಗಳ ಅರ್ಥ 'ಒಂದು ಸಮಾಜದ ವ್ಯಕ್ತಿಗಳು ಪರಸ್ಪರ ವ್ಯವಹಾರಕ್ಕಾಗಿ ಬಳಸುವ ಸ್ವತಂತ್ರ ಧ್ವನಿ ಸಂಕೇತಗಳ ಒಂದು ವ್ಯವಸ್ಥೆಯೇ ಭಾಷೆ' ಎಂಬುದು ನಿಜ. ಜನ ಗುರ್ತಿಸುವಂತಿರ ಬೇಕು. ಓದುವಂತಿರಬೇಕು, ಅರ್ಥೈಸುವಂತಿರಬೇಕು, ಭಾಷಾ ಶೈಲಿ ಸರಳ ಮತ್ತು ಸುಂದರವಾಗಿರಬೇಕು ಎಂಬುವುದನ್ನು ಸಾಬೀತು ಪಡಿಸುತ್ತದೆ.

ಸಾಹಿತ್ಯದ ಪ್ರಕಾರಗಳಲ್ಲಿ ಎರಡು ರೀತಿ ಇದ್ದಾಗೆ (ಜನಪದ ಸಾಹಿತ್ಯ ಶಿಷ್ಟ್ಯ ಸಾಹಿತ್ಯ) ಭಾಷೆಯಲ್ಲಿಯೂ ಕೂಡ ಎರಡು ವಿಧಗಳುಂಟು ಎಂದು ಮೇಲಿನಂತೆ ತಿಳಿದಿದ್ದೇವೆ.

ಅ) ಆಡುಭಾಷೆ

ಆ) ಶಿಷ್ಟ ಭಾಷೆ

ಮೇಲಿನ ಎರಡು ಸಾಹಿತ್ಯವನ್ನು ಬಳಸಿಕೊಂಡು ಕವಿ ಹೇಗೆ ಕಾವ್ಯವನ್ನು ರಚಿಸಿದ್ದಾರೆ ಎಂಬುವುದನ್ನು ಅಧ್ಯಯನ ಮಾಡುವುದೇ ಪ್ರಮುಖವಾದ ಉದ್ದೇಶ.

ಯಾವ ಸಮುದಾಯವು ಅಕ್ಷರದಿಂದ ವಂಚಿತರಾಗಿ ಸಮಾಜದಲ್ಲಿ ಕೀಳೆನಿಸಿಕೊಂಡು, ಬಹಿಷ್ಕೃತಗೊಂಡ ಊರ ಹೊರಗೆ ಬದುಕನ್ನು ಸಾಗಿಸುತ್ತಾ ಕತ್ತಲ ಸಾಮ್ರಾಜ್ಯದಲ್ಲಿ ಮುಳುಗಿತ್ತೋ ಅಂತಹ ಸಮುದಾಯವು ತನ್ನ ನೋವು, ಹೊರಗೆಡವಲು ಮೇಲೆದ್ದು ಅಕ್ಷರ ಕಲಿತು ಬಂಡಾಯವನ್ನು ತನ್ನ ಒಡಲಲ್ಲಿ ಕಟ್ಟಿಕೊಂಡು ಪ್ರಪ್ರಥಮ ಬಾರಿಗೆ ಅಸಮಾನತೆಯ ವಿರುದ್ಧ ತನ್ನ ನೋವಿನ ಸಮಾಜದ ಕಟ್ಟ ಕಡೆಯ ಅತ್ಯಂತ ಕಡೆಗಣಿಸಲ್ಪಟ್ಟ ಮನುಷ್ಯ ತನ್ನ ದನಿಯನ್ನು ಮುಗಿಲೆತ್ತರಕ್ಕೆ ಏರಿಸಿ ಕನ್ನಡ ಭಾಷೆಯ ಸೊಬಗನ್ನು ತನ್ನ ತುಳಿತಕ್ಕೊಳಪಟ್ಟ ನೋವಿನ ಬದುಕನ್ನು ವರ್ಣಿಸಲು ಬಳಸಿದುದು ಈ ದಶಕದ ಐತಿಹಾಸಿಕ ಮಹತ್ವದ ಕೊಡುಗೆಯಾಗಿದೆ.

ಇಡೀ ಅಧ್ಯಯನದಲ್ಲಿ ಗ್ರಾಮ್ಯ ಮತ್ತು ಶಿಷ್ಟ ಪದ ಬಳಕೆಯ ಸಾಹಿತ್ಯವನ್ನು ಕಾಣಬಹುದಾಗಿದೆ ಅಂದರೆ ನೋವು–ನಲಿವು, ವ್ಯಂಗ್ಯ, ವಿಡಂಬನೆ, ಪ್ರೀತಿ–ಪ್ರೇಮ ಎಲ್ಲಾವನ್ನು ಪ್ರತಿಬಿಂಬಿಸುವಂತಹ ಭಾಷಾ ಶೈಲಿಯನ್ನು ಕವಿ ತನ್ನ ಬರಹದ ಮೂಲಕ ವ್ಯಕ್ತಪಡಿಸಿರುವುದನ್ನು ಅಧ್ಯಯನ ಮಾಡುವುದೇ ಉದ್ದೇಶ ಮತ್ತು ವ್ಯಾಪ್ತಿಯಾಗಿದೆ.

### ಅ) ದಲಿತ ಕಾವ್ಯಕ್ಕೆ ಪ್ರೇರಣೆಗಳು

ಕನ್ನಡ ದಲಿತ ಕಾವ್ಯವು ಶೋಷಿತರ ನೆಲೆಯಿಂದ ಒಡಮೂಡಿದ ಅಭಿವ್ಯಕ್ತಿ ಮಾಧ್ಯಮಎಂದರೆ ಬಹುಶಃ ಅತಿಶಯೋಕ್ತಿಯಾಗಲಾರದು, “‘ಬಸವ, ಕನಕ, ಸರ್ವಜ್ಞರು ರೂಪಿಸಿದ ಕನ್ನಡದ ಪ್ರಗತಿಪರ ಪರಂಪರೆಯು ನಿರಂತರವಾಗುವಂತೆ ದುಡಿಯುವುದೇ ದಲಿತ ಸಾಹಿತ್ಯದ ಗುರಿಯಾಗಿದೆ”[3] ಎಂದು ಹೇಳಿರುವ ಸಿದ್ಧಲಿಂಗಯ್ಯನವರ ಮಾತು ನಿಜಕ್ಕೂ ಅರ್ಥಪೂರ್ಣ.

ಇದೆ ಒಂದು ‘ದಲಿತ ಕಾವ್ಯಕ್ಕೆ ಪ್ರೇರಣೆಯಾದ ಅಂಶಗಳನ್ನು ಪುರುಷೋತ್ತಮ ಬಿಳಿಮಲೆಯವರು ತಮ್ಮ ಲೇಖನದಲ್ಲಿ ಈ ಕೆಳಗಿನಂತೆ ಗುರುತಿಸುತ್ತಾರೆ.

ಇವು ಕೇವಲ ದಲಿತ ಕಾವ್ಯಗಳಿಗಷ್ಟೇ ಅಲ್ಲ, ಇಡೀ ದಲಿತ ಸಾಹಿತ್ಯಕ್ಕೆ ಪ್ರೇರಣೆಯನ್ನೊದಗಿಸಿವೆ ಎಂಬುದು ಗಮನಾರ್ಹ.

೧. ಅಂಬೇಡ್ಕರ್ : ಅಸ್ಪೃಶ್ಯರನ್ನ ವ್ಯಾಪಕವಾಗಿ ಪ್ರಭಾವಿಸಿ ಅವರಲ್ಲಿ ಸ್ವಾಬಿಮಾನ ಮೂಡಿಸಿದ್ದು.

೨. ಲೋಹಿಯಾ : ಶೂದ್ರ ಪ್ರಜ್ಞೆಯನ್ನ ಜಾಗೃತಗೊಳಿಸುವುದರ ಜೊತೆಗೆ ಪುರೋಹಿತ ಶಾಹಿಯ ಬಗ್ಗೆ ತೀವ್ರವಾದ ಅತೃಪ್ತಿ ಮೂಡಿದ್ದು

೩. ಗಾಂದೀಜಿ : ಹಳ್ಳಿಗಳ ಬಗೆಗೆ ಒಲವು ಮೂಡುವಂತೆ ಮಾಡಿದ್ದು.

೪. ಮಾವ್ರೋ : ನಕ್ಸಲ್ ಬಾರಿ ಚಟುವಟಿಕೆಗಳಿಗೆ ಪ್ರೇರಣೆ ನೀಡಿದ್ದು.

೫. ಮಾರ್ಕ್ಸ್ : ಜನರಲ್ಲಿನ ವರ್ಗ ಪ್ರಜ್ಞೆಯನ್ನು ಜಾಗೃತಗೊಳಿಸಿದ್ದು.

೬. ಜ್ಯೋತಿಭಾಪುಲೆ : ನಾಸ್ತಿಕತೆಗೆ ನೀರೆರದು ವಿದ್ಯಾಜ್ಯೋತಿ ನೀಡಿದವರು

೭. ಪೆರೆಯಾರ್ : ವೈದಿಕ ಪುರಾಣಗಳನ್ನು ಕಟು ವಿಮರ್ಶೆಗೆ ಒಳಪಡಿಸಿದರು

೮. ನಾರಾಯಣಗುರು : ಅಸ್ಪೃಶ್ಯರ ಕಡೆಗೆ ಇತರರ ಗಮನವನ್ನು ಗಂಭೀರವಾಗಿ ಸೆಳೆದದ್ದು.

೯. ಮಹಾರಾಷ್ಟ್ರದಲ್ಲಿ ಜನಪ್ರಿಯರಾಗಿದ್ದ 'ದಲಿತ ಸಾಹಿತ್ಯ ಚಳುವಳಿ'ಯು ತನ್ನ ಪ್ರಭಾವವನ್ನು ಕರ್ನಾಟಕಕ್ಕೆ ವಿಸ್ತರಿಸಿದ್ದು.

೧೦. ತುರ್ತು ಪರಿಸ್ಥಿತಿಯಲ್ಲಾದ ಎಚ್ಚರ ಮತ್ತು ಕರ್ನಾಟಕದಲ್ಲಿ ಹೆಚ್ಚಿದ ಜಾನಪದ ಅಭ್ಯಾಸ.

೧೧. ಕರ್ನಾಟಕ ದಲಿತ ಸಂಘರ್ಷ ಸಮಿತಿಯ ಕೆಲಸಗಳು.

೧೨. ಬಸವ ಲಿಂಗಪ್ಪನವರ ಬೂಸಾ ಪ್ರಕರಣ ಮತ್ತು ಕಪ್ಪು ಸಾಹಿತ್ಯದ ಲಭ್ಯತೆ.[೩]

ಹೀಗೆ ಅಕ್ಷರ ಸಂಸ್ಕೃತಿಯಿಂದ ವಂಚಿತರಾಗಿದ್ದ ಒಂದು ಸಮುದಾಯವು ಅಂಬೇಡ್ಕರ್, ಪುಲೆ, ಪರಿಯಾರ್ ಮುಂತಾದವರ ವಿಚಾರಧಾರೆಗಳನ್ನು ಓದುವುದರೊಂದಿಗೆ ಫ್ರಾನ್ಸ್, ರಷ್ಯಾ, ಆಫ್ರಿಕಾ, ಮುಂತಾದ ರಾಷ್ಟ್ರಗಳಲ್ಲಿ ಆದ ಕ್ರಾಂತಿಯ ಘಟನೆಗಳನ್ನು ತಿಳಿಯುವುದರೊಂದಿಗೆ ಮತ್ತು ಅಮೇರಿಕಾ ಹಾಗೂ ಆಫ್ರಿಕಾದ ಕಪ್ಪು ಸಾಹಿತ್ಯ ಗ್ರಹಿಸುವುದರೊಂದಿಗೆ ನೆಲ್ಸನ್ ಮಂಡೇಲಾ ಅವರ ಕಪ್ಪು ಜನರ ಪರ ಉಗ್ರ ಹೋರಾಟ ಜೈಲುವಾಸ ಮುಂತಾದವುಗಳಿಂದ

ಪ್ರೇರಣೆಯನ್ನು ಪಡೆದಂತಹ ಕರ್ನಾಟಕ ದಲಿತ ಸಾಹಿತ್ಯವು ತನ್ನ ರಚನೆಯ ಓನ್ನೆಲೆಯಲ್ಲಿ ಇವರನ್ನ ಚರ್ಚಿಸುವುದರೊಂದಿಗೆ ಕನ್ನಡ ಸಾಹಿತ್ಯದಲ್ಲಿ ಮಹತ್ವದ ಮತ್ತು ಪರಿಣಾಮಕಾರಿಯಾಗಿ ದಾಪುಗಾಲಿಟ್ಟಿತು.

ಇಂತಹ ಒಂದು ಐತಿಹಾಸಿಕ ಹಿನ್ನಲೆಯುಳ್ಳ ದಲಿತ ಕಾವ್ಯಕ್ಷೇತ್ರದಲ್ಲಿ ತಮ್ಮನ್ನು ತಾವು ತೊಡಗಿಸಿಕೊಂಡ ಪ್ರಮುಖ ಕವಿಗಳು ಮತ್ತು ಲೇಖಕರೆಂದರೆ ಡಾ॥ಸಿದ್ಧಲಿಂಗಯ್ಯ, ದೇವನೂರು ಮಹಾದೇವ, ಸರಜೂ ಕಾಟ್ಕರ್, ಡಾ॥ಚನ್ನಣ್ಣ ವಾಲೀಕರ, ಇಂದೊ ದರ ಹೊನ್ನಾಪುರ, ಬಿ.ಕೃಷ್ಣಪ್ಪ, ಕೆ.ರಾಮಯ್ಯ, ಮುನಿವೆಂಕಟಪ್ಪ ರಂಜಾನ ದರ್ಗಾ, ಬಸವರಾಜ ಸರಬರದ ಮುಂತಾದವರನ್ನ ಗುರುತಿಸಬಹುದಾಗಿದೆ.

ಇಲ್ಲಿ ನಾನು ಮುಖ್ಯವಾಗಿ ಈ ಪ್ರಬಂಧದಲ್ಲಿ ದಲಿತ ಕವಿ **"ಡಾ॥ಸಿದ್ಧಲಿಂಗಯ್ಯನವರ ಕವನಗಳಲ್ಲಿ ಭಾಷೆ"** ಎಂಬುವುದನ್ನು ತಿಳಿಸುವುದರ ಕಾರಣ ದಲಿತ ಸಾಹಿತ್ಯ ಕ್ಷೇತ್ರವನ್ನು ಹೆಚ್ಚಾಗಿ ಅವಲೋಕಿಸಲಾಗಿದೆ. ಆದ್ದರಿಂದ ಬಂಡಾಯ ಸಾಹಿತ್ಯವನ್ನು ಕಡಿಮೆ ಪ್ರಮಾಣದಲ್ಲಿ ಅವಲೋಕಿಸಲಾಗಿದೆ.

**ಆ) ದಲಿತ ಕವಿಯಾಗಿ ಸಿದ್ಧಲಿಂಗಯ್ಯ**

ಮಾಗಡಿ ತಾಲೂಕಿನಲ್ಲಿ ಒಂದು ಬಡ ಕುಟುಂಬದಲ್ಲಿ ಹುಟ್ಟಿದ ಸಿದ್ಧಲಿಂಗಯ್ಯನವರು ತಮ್ಮ ಕಾವ್ಯ ಭಾಷೆಗೆ ತಮ್ಮ ಸುತ್ತಲಿನ ಪರಿಸರದ ಭಾಷೆಯ ಸೊಗಡನ್ನೇ ಆರಿಸಿಕೊಂಡವರು ಹಾಗೂ ಕಾವ್ಯದ ವಸ್ತುವಾಗಿ ತನ್ನ ಮತ್ತು ತನ್ನ ಸುತ್ತಲಿನ ಜನತೆಯ ನೋವು, ಅವಮಾನ, ಅಸಹಾಯಕತೆ, ದುಃಖ ದುಮ್ಮಾನ, ಸಿಟ್ಟು, ಆಕ್ರೋಶ, ಒಲವು ಇಡೀ ಜನತೆಯ ತುಡಿತಮಿಡಿತಗಳನ್ನೇ ಬಳಸಿಕೊಂಡವರು. "ತನ್ನನ್ನು ತುಳಿಯುವ ಸಂಸ್ಕೃತಿಯನ್ನು ತಿರಸ್ಕರಿಸಿದೆ ಅರ್ಥಪೂರ್ಣವಾದುದನ್ನು ದಲಿತ ಸಾಹಿತ್ಯ ಸೃಷ್ಟಿಸಲು ಸಾಧ್ಯವಿಲ್ಲ"[೪] ಎಂದು ನಂಬಿದ್ದ ಸಿದ್ಧಲಿಂಗಯ್ಯನವರು ಮೇಲ್ವರ್ಗದ ಸಂಸ್ಕೃತಿಯನ್ನು ತಿರಸ್ಕರಿಸುವುದರ ಜೊತೆಗೆ ಕೆಳವರ್ಗದ ಸಂಸ್ಕೃತಿಗೆ ಹೆಚ್ಚಿನ ಮಹತ್ವವನ್ನು ನೀಡಿದರು.

ಸಿದ್ಧಲಿಂಗಯ್ಯನವರ ಮೊದಲ ಕವನ ಸಂಕಲನ 'ಹೊಲೆಮಾದಿಗರ ಹಾಡು' ೧೯೭೫ರಲ್ಲಿ ಗುಡುಗು-ಸಿಡಿಲುಗಳ ಆರ್ಭಟದೊಂದಿಗೆ ಕನ್ನಡ ಕಾವ್ಯಲೋಕವನ್ನು ಪ್ರವೇಶಿಸಿತು. ಅಸಮಾನತೆಯ ಬಗ್ಗೆ ಇದ್ದ ನೋವು, ಆಕ್ರೋಶ, ಆವೇಶಗಳು ಹನಿ-ಹನಿಯಾಗಿಯೇ ಇಡೀ ಸಂಕಲನದಲ್ಲಿ ಪ್ರಜ್ವಲಿಸಿರುವುದನ್ನು ಕಾಣಬಹುದು.

ಕವಿಯ ಕಾವ್ಯದಲ್ಲಿ ಬರುವ ಆಕ್ರೋಶದ ಕಿಡಿಗಳು ಕೇವಲ ವೈಯುಕ್ತಿಕ ದ್ವೇಷದಿಂದ ಬಂದಂತಹುಗಳಲ್ಲ. ಅವು ಇಡೀ ಶೋಷಿತ ಜನ ಸಮುದಾಯದ ಆಕ್ರೋಶದ ಕಿಡಿಗಳಾಗಿ ಬಂದಿರುವಂತವುಗಳು.

ದಲಿತರ ಹೀನಾಯ ಬದುಕನ್ನ ಕಂಡು ಉಂಡಂತಹ ಕವಿ ರೊಚ್ಚಿಗೆದ್ದು ದಲಿತರ ದುಃಖ ದುಮ್ಮಾನಗಳನ್ನು ಅರ್ಥಪೂರ್ಣವಾಗಿ ತಮ್ಮ ಕವನಗಳಲ್ಲಿ ದಾಖಲಿಸಿದ್ದರಿಂದ ಅವರ ಕವನಗಳು ಉತ್ಕಟಭಾವನೆಯ ಅಪ್ಪಟ ಅಭಿವ್ಯಕ್ತಿಯಾಗಿ ಮೂಡಿಬಂದಿದೆ.

ಸಿದ್ಧಲಿಂಗಯ್ಯನವರ ಎರಡನೇ ಕವನ ಸಂಕಲ 'ಸಾವಿರಾರು ನದಿಗಳು' ೧೯೭೯ ರಲ್ಲಿ ಪ್ರಕಟಗೊಂಡಿತು. ಮೊದಲ ಸಂಕಲನದ ಆಕ್ರೋಶದ ಕಿಡಿಗಳು ಇಲ್ಲಿ ಬಿಂಬಿತವಾದರೂ ಸಹ ಜಾತಿ ವ್ಯವಸ್ಥೆಗಿಂತ ಇಲ್ಲಿ ವರ್ಗವ್ಯವಸ್ಥೆ ಪರಿಣಾಮಕಾರಿಯಾಗಿ ಕೆಲಸ ಮಾಡಿರುವುದನ್ನು ಕಾಣಬಹುದು.

ಇದು ಅಂಬೇಡ್ಕರ್ ವಾದಿಯಾದ ಕವಿ ಹಾಗೆಯೇ ಮುಂದುವರಿದು ಮಾರ್ಕ್ಸ್‌ವಾದಿಯೇ ಆಗುವುದರ ಸ್ಪಷ್ಟ ಸೂಚನೆಯಾಗಿದೆ ಇಲ್ಲೆಯೇ ಹೋರಾಟದ ವ್ಯಾಪ್ತಿ ಹಿಗ್ಗಿ ಹೋರಾಟದ ತೀವ್ರತೆಗೆ ಸಾವಿರಾರು ನದಿಗಳು ಸೇರಿ ಸಾಗರದೋಪಾದಿಯಲ್ಲಿ ಬರಬೇಕೆನ್ನುವ ಬಯಕೆ ಮತ್ತು ಶ್ರಮಿಕವರ್ಗ ಅಧಿಕಾರಗಳಿಸಿಕೊಳ್ಳಬೇಕೆನ್ನುವ ತುಡಿತ ಈ ಕವನಗಳ ಹಿಂದಿನ ಆಶಯವಾಗಿದೆ.

ತದನಂತರ ೧೯೮೨ರಲ್ಲಿ ಪ್ರಕಟವಾದಂತಹ "ಕಪ್ಪುಕಾಡಿನ ಹಾಡು" ಹಿಂದಿನ ಕವನ ಸಂಕಲನಗಳ ರೊಚ್ಚು, ಆವೇಶಗಳನ್ನು ಸ್ಥಿಮಿತದಲ್ಲಿಟ್ಟು ಅಲ್ಲಿ ನಿಂತನೀರಿನ ಧ್ವನಿಯು ಅಡಕವಾಗಿರುವುದನ್ನ ಕಾಣಬಹುದು.

ಇಲ್ಲಿಯೇ ಕೆಲವು ಕವನಗಳು ಅದೇ ರೀತಿಯ ರೊಚ್ಚನ್ನು ತೋರಿದರೂ ಪ್ರೀತಿ, ಪ್ರೇಮ, ಸರಸ, ಒಲವುಗಳು ಈ ಕವನ ಸಂಕಲನದಲ್ಲಿ ಪ್ರಾಮುಖ್ಯತೆ ಪಡೆದಿರುವುದನ್ನು ಕಾಣಬಹುದು.

ಹಾಗೆಯೇ ೨೦೦೦ದಲ್ಲಿ ಪ್ರಕಟವಾದ 'ಹೊಸ ಕವಿತೆಗಳು' ಸಂಕಲನ ಸಹ 'ಕಪ್ಪು ಕಾಡಿನ ಹಾಡು'ನಂತೆಯೇ ಮೂಡಿ ಬಂದಿರುವುದನ್ನು ಕಾಣಬಹುದು.

ಹೀಗೆ ಕವಿಯು ಕವನದಿಂದ ಕವನಕ್ಕೆ ಅಥವಾ ಸಂಕಲನದಿಂದ ಸಂಕಲನಕ್ಕೆ ಬೆಳೆದು ಬಂದಿರುವುದನ್ನು ಅನೇಕ ವಿಮರ್ಶಕರು, ವಿದ್ವಾಂಸರು ಗುರ್ತಿಸಿದ್ದಾರೆ.

ಬದುಕು ಸತ್ಯ ಎಂಬ ನಿಲುವಿನಲ್ಲಿರುವ ಸಿದ್ಧಲಿಂಗಯ್ಯನವರ ಹೊಲೆ ಮಾದಿಗರ ಹಾಡು ೧೯೭೫ರಲ್ಲಿ ಪ್ರಕಟಗೊಂಡಿತು, ಅಲ್ಲಿಂದ ಮುಂದೆ ಕಥೆ ಕಾವ್ಯ, ಕಾದಂಬರಿ, ನಾಟಕ ಕ್ಷೇತ್ರದಲ್ಲಿ ಅತಿ ಹೆಚ್ಚು ಕೃಷಿ ನಡೆಯಿತು.

ಇವರ ಇನ್ನೂ ಬರಹಗಳೆಂದರೆ ಪಂಚಮಿ, ನೆಲಸಮ ಏಕಲವ್ಯ, ನಾಟಕಗಳು, ದಲಿತ ಸಾಹಿತ್ಯವನ್ನು ಪ್ರತಿಬಿಂಬಿಸುತ್ತವೆ ಎನ್ನಲಾಗಿದೆ.

"ಸಿದ್ಧಲಿಂಗಯ್ಯನವರ 'ಆಯ್ದ ಕವಿತೆ'ಗಳಿಗೆ ಮುನ್ನುಡಿ ಬರೆಯುತ್ತಾ ಡಾ॥ಡಿ.ಆರ್.ನಾಗರಾಜ್‌ರವರು "ಎರಡು ದಶಕಗಳಿಗೂ ಹಿಂದೆ ಮೊದಲ ಬಾರಿಗೆ ನಾನು ಗೆಳೆಯ ಸಿದ್ಧಲಿಂಗಯ್ಯನವರ ಕವಿತೆಗಳನ್ನು ಓದಿದಾಗ ಬೆಚ್ಚಿ ಬಿದ್ದಿದ್ದೆ. ಕಾರಣ, ಕವಿಯ ವ್ಯಕ್ತಿತ್ವಕ್ಕೂ, ಕವಿಗೂ ಇರುವ ವ್ಯತ್ಯಾಸ. ದೈನ್ಯತೆಯೇ ಸಾಕಾರವಾಗಿದ್ದ ಪುಟಾಣಿ ಕವಿ ಹೆಚ್ಚೆಂದರೆ ಇಪ್ಪತ್ತೈದು ಕೆ.ಜಿ.ಆಳು. ಆದರೆ, ಕವಿತೆಗಳೋ ಬೆಂಕಿಯ ಉಂಡೆಗಳು ಆದರೆ, ಕವಿಯ ವ್ಯಕ್ತಿತ್ವದಲ್ಲಿದ್ದ ಬಾಹ್ಯ ದೈನ ಮುಖದಾಡವಷ್ಟೇ ಎಂದು ನನಗೆ ಕವಿಯ ಪರಿಚಯವಾದ ಒಂದೆರಡು ವಾರಗಳಲ್ಲಿಯೇ ತಿಳಿಯಿತು ಎಂದಿರುವ ಮಾತು ನಿಜಕ್ಕೂ ಎಪ್ಪತ್ತರ ದಶಕದ ಸಿದ್ಧಲಿಂಗಯ್ಯನವರಿಗೆ ಹಿಡಿದ ಕನ್ನಡಿ."[೫]

ಸಿದ್ಧಲಿಂಗಯ್ಯನವರ ಕಾವ್ಯದಲ್ಲಿ ಬರುವ ಆಕ್ರೋಶದ ಕಿಡಿಗಳು ಕೇವಲ ವೈಯಕ್ತಿಕ ದ್ವೇಷದಿಂದ ಬಂದಂತಹುಗಳಲ್ಲ. ಅವು ಇಡೀ ಶೋಷಿತ ಜನ ಸಮುದಾಯದ ಆಕ್ರೋಶದ

ಕಿಡಿಗಳಾಗಿ ಬಂದಿರುವಂತಹುಗಳು. ದಲಿತರ ಹೀನಾಯ ಬದುಕನ್ನ ಕಂಡು ಉಂಡಂತಹ ಕವಿ ರೊಚ್ಚಿಗೆದ್ದು, ದಲಿತರ ದುಃಖ ದುಮ್ಮಾನಗಳನ್ನು ಅರ್ಥಪೂರ್ಣವಾಗಿ ತಮ್ಮ ಕವನಗಳಲ್ಲಿ ದಾಖಲಿಸಿದ್ದರಿಂದ, ಅವರ ಕವನಗಳು ಉತ್ಕಟ ಭಾವನೆಯ ಅಪ್ಪಟ ಅಭಿವ್ಯಕ್ತಿಯಾಗಿ ಮೂಡಿ ಬಂದಿರುವುದನ್ನು ಕಾಣಬಹುದು.

*ಇಕ್ರಲಾ–ವದೀರ್ಲಾ*

*ಈ ನನ್ ಮಕ್ಕಳ ಚರ್ಮ ಎಬ್ರಲಾ...*

ಎಂಬ ಮಾತುಗಳು ಬೆಂಕಿಯ ಉಂಡೆಗಳಾಗಿ ಅವರ ಲೇಖನಿಯಿಂದ ಹೊರಬಿದ್ದವು. "ಶತಮಾನಗಳಿಂದ ಉಪೇಕ್ಷೆಗೆ, ಅವಜ್ಞೆಗೆ ಒಳಗಾಗಿದ್ದ ಜನಾಂಗದವರು ಮೊದಲ ಬಾರಿಗೆ ಅಕ್ಷರಕಲಿತ ಪ್ರಜ್ಞೆ ಮೂಡಿಸಿಕೊಂಡಾಗ ಯಾವ ಬಗೆಯ ಸಾಹಿತ್ಯ ಸೃಷ್ಟಿ ಆಗಬಲ್ಲುದೆಂಬುದಕ್ಕೆ ಸಿದ್ಧಲಿಂಗಯ್ಯನವರ 'ಹೊಲೆಮಾದಿಗರ ಹಾಡು' ಕೃತಿ ಒಂದು ನಿದರ್ಶನವಾಗಿದೆ" ಎಂಬ ಡಾ॥ಸಿ.ಪಿ.ಸಿದ್ಧಾಶ್ರಮರವರ ಮಾತು ಗಮನಾರ್ಹ ಹಾಗೂ "ಶತಮಾನಗಳಿಂದ ತುಳಿತಕ್ಕೆ ಸಿಕ್ಕಿ ವರ್ಗದ ವೇದನೆ ಸಂವೇದನೆಗಳಿಗೆ ವಿಶಿಷ್ಟ ಅಭಿವ್ಯಕ್ತಿಯಾಗಿ ಮೊದಲ ಸಂಕಲನ ಹೊರ ಬಂದಿತು"[೬] ಎಂಬ ಜಿ.ಎಸ್.ಎಸ್.ರವರ ಮಾತು ಉಲ್ಲೇಖನೀಯ. ಈ ಎಲ್ಲಾ ರೀತಿಯ ಗುಣಗಳಿಂದಾಗಿ ಇವರ ಮೊದಲ ಕವನ ಸಂಕಲನ ಇಡೀ ಕನ್ನಡ ಸಾಹಿತ್ಯದಲ್ಲಿ ಒಂದು ಸಾಂಸ್ಕೃತಿಕ ದಾಖಲೆಯಾಯಿತು.

ಸಿದ್ಧಲಿಂಗಯ್ಯನವರ ಎರಡನೇ ಕವನ ಸಂಕಲ 'ಸಾವಿರಾರು ನದಿಗಳು' ೧೯೭೯ ರಲ್ಲಿ ಪ್ರಕಟಗೊಂಡಿತು. ಮೊದಲ ಸಂಕಲನದ ಆಕ್ರೋಶದ ಕಿಡಿಗಳು ಇಲ್ಲಿ ಬಿಂಬಿತವಾದರೂ ಸಹ ಜಾತಿ ವ್ಯವಸ್ಥೆಗಿಂತ ಇಲ್ಲಿ ವರ್ಗವ್ಯವಸ್ಥೆ ಪರಿಣಾಮಕಾರಿಯಾಗಿ ಕೆಲಸ ಮಾಡಿರುವುದನ್ನು ಕಾಣಬಹುದು. ಇದು ಅಂಬೇಡ್ಕರ್ ವಾದಿಯಾದ ಕವಿ ಹಾಗೆಯೇ ಮುಂದುವರಿದು ಮಾರ್ಕ್ಸ್‌ವಾದಿಯೇ ಆಗುವುದರ ಸ್ಪಷ್ಟ ಸೂಚನೆಯಾಗಿದೆ ಇಲ್ಲೆಯೇ ಹೋರಾಟದ ವ್ಯಾಪ್ತಿ ಹಿಗ್ಗಿ ಹೋರಾಟದ ತೀವ್ರತೆಗೆ ಸಾವಿರಾರು ನದಿಗಳು ಸೇರಿ ಸಾಗರದೋಪಾದಿಯಲ್ಲಿ ಬರಬೇಕೆನ್ನುವ ಬಯಕೆ ಮತ್ತು ಶ್ರಮಿಕವರ್ಗ ಅಧಿಕಾರಗಳಿಸಿಕೊಳ್ಳಬೇಕೆನ್ನುವ ತುಡಿತ ಈ ಕವನಗಳ ಹಿಂದಿನ

ಆಶಯವಾಗಿದೆ. "ಮಾರ್ಕ್ಸ್‌ವಾದ, ಜಾನಪದ, ಬಂಡಾಯ ಮೊದಲಾದ ಜನಪರ ಧೋರಣೆಗಳನ್ನು ಮೈಗೂಡಿಸಿಕೊಂಡು ಬೆಳೆದಿರುವ ಬೆಳೆಯುತ್ತಿರುವ ಸಿದ್ಧಲಿಂಗಯ್ಯ ವರ್ಗವರ್ಣ ವ್ಯವಸ್ಥೆಯ ಉಗ್ರ ವಿರೋಧಿ" ಎಂಬ ಚಿದಂಬರ ಬೈಕಂಪಾಡಿಯವರ ಮಾತು ಈ ಕವನ ಸಂಕಲನದ ಸಂದರ್ಭಕ್ಕೆ ಮಹತ್ವವಾದುದಾಗಿದೆ.

ತದನಂತರ ೧೯೮೩ರಲ್ಲಿ ಪ್ರಕಟವಾದಂತಹ 'ಕಪ್ಪು ಹಾಡಿನ ಹಾಡು' ಹಿಂದಿನ ಕವನ ಸಂಕಲನಗಳ ರೊಚ್ಚು, ಆವೇಶಗಳನ್ನ ಸ್ಥಿಮಿತದಲ್ಲಿಟ್ಟು ಅಲ್ಲಿ ನಿಟ್ಟುಸಿರಿನ ಧ್ವನಿಯು ಅಡಕವಾಗಿರುವುದನ್ನು ಕಾಣಬಹುದು. ಇಲ್ಲಿಯ ಕೆಲವು ಕವನಗಳು ಅದೇ ರೀತಿಯ ರೊಚ್ಚನ್ನು ತೋರಿದರೂ ಪ್ರೀತಿ, ಪ್ರೇಮ, ಸರಸ, ಬಲಗಳು ಈ ಕವನ ಸಂಕನದಲ್ಲಿ ಪ್ರಾಮುಖ್ಯತೆ ಪಡೆದಿರುವುದನ್ನು ಕಾಣಬಹುದು. ಈ ರೀತಿಯಲ್ಲಿ ಕವಿಯ ಮನೋಧರ್ಮ ಮೆದುವಾದದ್ದು ವ್ಯವಸ್ಥೆಯ ಪರ ಮಾಡಿಕೊಂಡ ರಾಜಿಯೋ ಅಥವಾ ಮೊದಲೆರಡು ಸಂಕಲನಗಳ ಹರಿತ ಮತ್ತು ಮೊನಚು ಮುಂದೆ ಅವಶ್ಯಕವಿಲ್ಲ ಎಂಬ ನಿಲುವೋ ತಿಳಿಯದು.

ಕವಿಗೆ ಕುವೆಂಪು ಶೈಲಿ ಮೈದಳೆದಿದ್ದರೂ ಅದಕ್ಕೂ ಮಿಗಿಲಾದಂತಹ ಭಿನ್ನಲಯ ಶರೀರ ಅವರ ಕವನಗಳಲ್ಲಿತ್ತು ಎಂಬುದನ್ನ ಡಿ.ಆರ್.ನಾಗರಜ್‌ರವರು ಮೊದಲೇ ಗುರುತಿಸಿದ್ದಾರೆ. ಇದಕ್ಕೆ ಪೂರಕವೆಂಬತೆ ಲಿಂಗದೇವರು ಹಳೆಮನೆಯವರು "ನವೋದಯದಿಂದ ತನಗೆ ಬೇಕಾದ ಲಯವಿನ್ಯಾಸವನ್ನೂ, ಜಾನಪದ ಸಾಹಿತ್ಯದಿಂದ ಅಗತ್ಯಕ್ಕೆ ಬೇಕಾದಷ್ಟು ಪದ ಸಮುಚ್ಚಯವನ್ನೂ ತೆಗೆದುಕೊಂಡ ಸಿದ್ಧಲಿಂಗಯ್ಯ ತಮ್ಮ ಅಭಿವ್ಯಕ್ತಿಗೆ ಕಸುವು ತುಂಬಿದರು"[೨] ಎಂಬ ಮಾತು ಅರ್ಥಪೂರ್ಣ.

ಹೀಗೆ ದಲಿತರ ಜೀವನಾನುಭವದ ದನಿಯಾಗಿ ಮೂಡಿಬಂದ ಸಿದ್ಧಲಿಂಗಯ್ಯನವರು ತಮ್ಮ ರಚನೆಯ ಉದ್ದೇಶ ಮತ್ತು ಆಶಯಗಳೇನು ಎಂಬುದಕ್ಕೆ 'ಕಪ್ಪು ಕಾಡಿನ ಹಾಡು' ಕವನ ಸಂಕಲನದ 'ನನ್ನ ಕವನ'ದಲ್ಲಿ ಸ್ಪಷ್ಟವಾಗಿ ಹೇಳಿದ್ದಾರೆ. ತಮ್ಮ ಕವನದ ಆಶಯವನ್ನು ಕವನದಲ್ಲೇ ಹೇಳಿರುವುದು ಸಿದ್ಧಲಿಂಗಯ್ಯನವರ ವೈಶಿಷ್ಟ್ಯ. ಈ ಕವಿತೆಯ ಕೆಲವು ಸಾಲುಗಳು ಈ ರೀತಿ ಇವೆ.

"ಗುಡಿಸಲಿನಲ್ಲಿ ಅರಳುವ ಗುಲಾಬಿ
ನಕ್ಷತ್ರ ತನ್ನ ಕವನ
ಕತ್ತಲೆಯಲ್ಲಿ ಕಾಣುವ ಬೆಳಕು
ಬಂಡಾಯದ ಈ ಕವನ
ಬದುಕ ಪ್ರೀತಿಸುವ ಬಡವರ ಮಗಳು
ನಿರಾಭರಣೆ ಕವನ
ಜನಗಳು ತಿನ್ನುವ ಅನ್ನದ ಅಗಳು
ಜೀವ ನನ್ನ ಕವನ
ನನ್ನ ಜನದೊಡನೆ ನಾನಾಡಿದ ಮಾತು
ನಾನು ಕೊಡುವ ಕವನ
ನನ್ನ ಜನರ ನಾ ನೋಡಿದ ರೀತಿ
ನನ್ನ ಒಡಲ ಕವನ."[೮]

ಈ ಇಡೀ ಕವನವು ಸಿದ್ಧಲಿಂಗಯ್ಯನವರ ಕಾವ್ಯ ರಚನೆಯ ಹಿಂದಿನ ಉದ್ದೇಶವನ್ನ ಮತ್ತು ಆದರ ಕಾವ್ಯದ ಪ್ರಮುಖ ಲಕ್ಷಣಗಳನ್ನು ತಿಳಿಸುತ್ತದೆ. ಅಂಬೇಡ್ಕರ್ ಮತ್ತು ಮಾರ್ಕ್ಸ್ ವಿಚಾರಧಾರೆಗಳಿಂದ ಪ್ರಭಾವಿತರಾದ ಕವಿಯು, ಕಪ್ಪು ಮತ್ತು ಕೆಂಪುಗಳ ಬಳಕೆಯಲ್ಲಿ ಇಡೀ ಕವನದುದ್ದಕ್ಕೂ ನಿಶ್ಚಿತ ಅರ್ಥಗಳ ದನಿಯಲ್ಲಿ ಮಾತನಾಡಿರುವುದು ಗಮನಾರ್ಹ. ಒಟ್ಟಾರೆ ಈ ಕವನ ಕುರಿತು ಹೇಳುವುದಾದರೆ 'ಶತಶತಮಾನಗಳಿಂದ ಹಸಿವು, ನೋವುಗಳನ್ನು ಉಂಡು, ಅವಮಾನದ ಬೆಂಕಿಯಲ್ಲಿ ಬೆಂದು ಕರಕಲಾಗಿ, ಹೆಸರು ಹೇಳಿಕೊಳ್ಳಲೂ ಸಹ ಧೈರ್ಯವಿಲ್ಲದೆ ಮೂಲೆಗುಂಪಾದ ಜನರ ನಡುವಿನಿಂದ ಸಿಡಿದ ಈ ಕವಿಯು ಸಮುದಾಯದ ಅನುಭವವೆಂದೇ ಹೇಳಬಹುದು.

ಪ್ರೊ.ಎಸ್.ಜಿ.ಸಿದ್ಧರಾಮಯ್ಯನವರು ಗುರುತಿಸಿರುವ ಪ್ರಕಾರ "ಹುಟ್ಟಿನ ಮೂಲದ ಅನುಭವವನ್ನ ಅರ್ಥೈಸುವಲ್ಲಿ ಈ ಚಿಂತನೆಗಳ ಗಾಢ ಪ್ರಭಾವವಿದೆ. ಇದರ ಪರಿಣಾಮವೆಂದರೆ ಕವನಗಳಲ್ಲಿ ಪ್ರತಿಪಾದಿತವಾಗುವ ವಿಚಾರ, ಸ್ಪಷ್ಟತೆ, ಖಚಿತತೆಯ ನಿಖರತೆಯಲ್ಲಿ ಆಕೃತಿ

ಪಡೆದಿದೆ. ಅಲ್ಲಿ ದ್ವಂದ್ವ ಸಂದಿಗ್ಧ ಸಂಕೀರ್ಣತೆ ಇತ್ಯಾದಿ ಸೂಕ್ಷ್ಮತೆಗಳಿಗೆ ಎಡೆಯಲ್ಲಿ ತರ್ಕಾತೀತವಾದ ಯಾವುದೇ ನೆಲೆಯ ಅನುಭವಗಳಿಗೂ ಇಲ್ಲಿ ಅವಕಾಶವಿಲ್ಲ. ಇಲ್ಲಿಯ ವೈಚಾರಿಕ ಆಕೃತಿ ನೇರವಾದದ್ದು ಸ್ಪಷ್ಟವಾದದ್ದು ಖಚಿತವಾದದ್ದು"[5] ಎಂದಿರುವ ಮಾತುಗಳು ಈ ಕವನದ ಬಹುಪಾಲು ಆಶಯಗಳಿಗೆ ನಿಲುಕುತ್ತದೆ.

ಹೀಗೆ ಸುಂದರವಾದ ಸರಳ ಅಭಿವ್ಯಕ್ತಿಯಲ್ಲೇ ತಮ್ಮ ಕಾವ್ಯದ ನೆಲೆಗಟ್ಟನ್ನು ಹೇಳಿದಂತ ಕವಿಯು ಕಾಡಿನ ನಡುವೆ ಕಂಗೆಟ್ಟವರಿಗೆ ಮತ್ತು ನಡುರಾತ್ರಿಯಲ್ಲಿ ನಡುಗುವ ಜನತೆಗೆ ತಮ್ಮ ಕವನಗಳ ಮೂಲಕ ದಾರಿದೀಪವಾದರು ಕತ್ತಲನಾಡಿನ ಜನತೆಗೆ ಬಂಡಾಯದ ಮೂಲಕ ಬೆಳಕನ್ನು ತರಲು ಹೊರಟ ಸಿದ್ಧಲಿಂಗಯ್ಯನವರು ತಮ್ಮ ಕವಿತೆ ಕನವರಿಸುವ, ಹಂಬಲಿಸುವ ಮತ್ತು ಹಾರೈಸುವ ಪರಿಯನ್ನ 'ಹೊಸ ಕವಿತೆಗಳು' ಸಂಕಲನದ 'ಕನವರಿಕೆ' ಕವನದಲ್ಲಿ ಪ್ರತಿಬಿಂಬಿಸಿದ್ದಾರೆ.

*"ಅಪರಿಚಿತ ಕಣಿವೆಗಳಲಿ ಪ್ರೀತಿಯ ಪ್ರವಾಹ ಉಕ್ಕಿ*
*ಭೀತಿಯ ಬಂಡೆಗಳು ಕರಗಲೆಂದು..............*
*ಎಂದು ಇವರ ಕವಿತೆ ಕನವರಿಸಿದರೆ*
*ಅಪರಾತ್ರಿಯಲ್ಲಿ ಕತ್ತು ಹಿಸುಕುವ ಕೈಗಳು*
*ಬೆಚ್ಚಿ ಕೆಳಗಿಳಿಯಲೆಂದು.............*

ಅವರ ಕವಿತೆ ಹಂಬಲಿಸುತ್ತದೆ.

ಆದರೆ ಈ ಕನವರಿಕೆ ಮತ್ತು ಹಂಬಲಿಸುವಿಕೆಗಿಂತ ಅವರ ಕವಿತೆ ಹಾರೈಸುವ ಪರಿ ಮಾತ್ರ ತುಂಬಾ ವಿಶಿಷ್ಟವಾದುದು.

*ಕಲ್ಲು ಕಟ್ಟಡದೆದುರು ಕೈಚೆಲ್ಲಿ ಕುಳಿತವರ*
*ನಿಟ್ಟುಸಿರು ಧಿಕ್ಕಾರವಾಗಲೆಂದು*
*ಒದೆತ ಹೊಡೆತಕ್ಕೆ ಸಿಕ್ಕಿ ಭೂಗತರಾದವರು*
*ಒಂದೇ ನೆಗೆತಕ್ಕೆ ಉತ್ತರ ಕೊಡಲೆಂದು*

*ಅಕ್ಷರ ಅಗ್ನಿಕುಂಡದಲ್ಲಿ*

*ಸಿಟ್ಟು ಧಗಧಗಿಸಿ ಉರಿಯುತ್ತಿರಲೆಂದು*

*ನನ್ನ ಕವಿತೆ ಹಾರೈಸುತ್ತದೆ."*[೧೦]

ಎಂಬ ಸಾಲುಗಳು ಇಡೀ ದಲಿತ ಸಂಸ್ಕೃತಿಗೆ ಈ ಕವಿಯ ಕಾವ್ಯ ಕೊಡಬೇಕಾದ ಅಪೇಕ್ಷೆಯನ್ನು ಸೂಚಿಸುವಂತಿವೆ. ಇಡೀ ಕವನದಲ್ಲಿ ದಲಿತರ ಎಚ್ಚರ ಮಡುಗಟ್ಟಿದೆ.

'ಸಾವಿರಾರು ನದಿಗಳು' ಕವನ ಸಂಕಲನದ 'ಚೋಮನ ಮಕ್ಕಳ ಹಾಡು' ಎಂಬ ಕವಿತೆಯೂ ಸಹ ಸಿದ್ಧಲಿಂಗಯ್ಯನವರ ಕಾವ್ಯ ರಚನೆಯ ಉದ್ದೇಶವನ್ನು ತಿಳಿಸುವಲ್ಲಿ ಯಶಸ್ವಿಯಾಗುತ್ತದೆ. ಇಡೀ ಕವಿತೆ ಶಿವರಾಮ ಕಾರಂತರ 'ಚೋಮನದುಡಿ' ಕಾದಂಬರಿಗೆ ಒಂದು ಸೃಜನ ಶೀಲ ಹಾಗೂ ತಾತ್ವಿಕ ಪ್ರತಿ ಕ್ರಿಯೆಯಾಗಿದೆ. ಚೋಮನ ಮಕ್ಕಳು ನಾವು ಎಂದು ಹೇಳುವುದರೊಂದಿಗೆ ಕವಿಯು ತಮ್ಮ ಸಹಜ ಸ್ಥಿತಿಯನ್ನು ಅದರ ಜೊತೆ ತಳಕು ಹಾಕಿದ್ದಾರೆ.

*"ಕಣ್ಣಿಗೆ ಒಳಗೆ ನೋವಿರುವವರು*

*ಮಣ್ಣಿನ ಒಳಗೆ ಮುಖವಿಟ್ಟವರು*

*ತಾಯಿಯನಗಲಿದ ಮಕ್ಕಳು ನಾವು*

*ನೋವನಪ್ಪಿದವರು*

*ಉಕ್ಕಿನ ಮಯ್ಯಿ ಹೂವಿನ ಮನಸು*

*ಮೂಡದ ಭೂಮಿಯ ಗೇಣಿಯ ಕನಸು*

*ಭೂತಾಯಿಯ ಮಲಮಕ್ಕಳು ನಾವು*

*ಚೋಮನ ಎಲುಬುಗಳು"*[೧೧] .

ಎಂದು ತಮ್ಮ ಜನ ಸಮುದಾಯಕ್ಕೆ ಕನ್ನಡಿ ಹಿಡಿದಂತ ಕವಿಯು ಕೊನೆಗೆ ಗೇಣಿ ಸಿಗದೆ ನೆಲದ ಆಧಾರವು ತಪ್ಪಿ ಮುಗಿಲಿನ ಆಸರೆ ಸಿಗದಂತವರು ನಾವುಗಳು ಎಂದು ಹೇಳಿ ಇಡೀ ನಾಡಿನ ಜನತೆಯನ್ನು ಕುರಿತು

*"ಭೂಮಿ ಬೆಟ್ಟ ನೀಲಿಯ ಬಾನಿಗೆ*
*ನಮ್ಮಯ ನಾಡಿನ ಎಲ್ಲಾ ಜನತೆಗೆ*
*ಚೋಮನ ಹೆಸರು ಕಥೆಗೊತ್ತು*
*ಚೋಮನ ಮಕ್ಕಳಿ ಹೇಳುವ ಕಥೆಯನು*
*ಕೇಳಿರಿ ಸ್ವಾಮಿ ಈ ಹೊತ್ತು."*[೧೨]

ಎಂದಿರುವ ಕವಿಯ ಕಾವ್ಯ ಭಾಷೆ ಮಾತುಗಳು ಇಡೀ ತಮ್ಮ ಕಾವ್ಯೋದ್ದೇಶಕ್ಕೆ ಅರ್ಥಪೂರ್ಣ ಹೇಳಿಕೆಯಾಗಿದೆ. ಇಡೀ ಕವನ ದಲಿತ ಸಮುದಾಯದ ಚಿತ್ರಣದ ಜೊತೆಗೆ ಅವರ ನೋವಿನ ಕಥೆಯನ್ನ ಹೇಳುತ್ತದೆ. ಇಂತಹ ಒಂದು ನೋವಿನ ಕಥೆಯನ್ನ ಇಡೀ ನಾಡಿನ ಜನತೆಗೆ ತಿಳಿಸಬೇಕೆಂಬುದೇ ಸಿದ್ಧಲಿಂಗಯ್ಯನವರ ಕವನಗಳ ಮುಖ್ಯ ಆಶಯವೂ ಆಗಿದೆ. ಜೊತೆಗೆ ದಲಿತೇತರ ಲೇಖಕರು ಕೊಟ್ಟ ದಲಿತ ಚಿತ್ರಣಕ್ಕಿಂತ ಭಿನ್ನವಾದ ಹಾಗೂ ಅಧಿಕೃತವಾದ ದಲಿತ ಜೀವನ ಚಿತ್ರಣದ ಆಶಯವೂ ಈ ಸಾಲುಗಳಲ್ಲಿ ಕಾಣುತ್ತದೆ.

ಹೀಗೆ ನಾವು ಸಿದ್ಧಲಿಂಗಯ್ಯನವರ ಕವನಗಳನ್ನು ಹೆಚ್ಚು ವಿಶ್ಲೇಷಿಸುತ್ತಾ ಹೋದಂತೆಲ್ಲಾ ಅವರ ಕವನಗಳಲ್ಲಿ ನಾಟಕೀಯತೆಯ ಮಂಡನೆಗಳು, ಗೇಯತೆಯ ಗುಣಗಳು ಭಾವಗೀತಾತ್ಮಕ ಅಂಶಗಳು ಮಡುಗಟ್ಟಿ ನಿಂತಿರುವುದನ್ನು ಕಾಣಬಹುದು. ಜಾನಪದ ಸೊಗಡಿನ ಜೊತೆಗೆ ತಮಟೆಯ ಸದ್ದನ್ನೇ ಕಾವ್ಯದ ಲಯವನ್ನಾಗಿ ಆರಿಸಿಕೊಂಡಿರುವ ಕವಿಯ ಈ ಸಾಲುಗಳಲ್ಲಿ ತಮ್ಮಟೆಯ ಸದ್ದನ್ನೇ ಕಾಣಬಹುದು.

*ತುಕುಡ ತುಕಡದಲಿ ಗಂಟು ಮೂಳೆಯಲಿ*
*ಜಿನುಗುಟ್ಟುವ ಕೊಬ್ಬು*
*ತ್ವಡೆ ತೋಳಿನಲಿ ಗಲ್ಲ ಕತ್ತಿನಲಿ*
ತುಂಬಿಕೊಂಡ ಚರ್ಬಿ.

ಈ ತಮ್ಮಟೆ ಅನ್ನುವುದು ಕೆಳವರ್ಗದ ಸಂಸ್ಕೃತಿಯ ಅವಿಭಾಜ್ಯ ಅಂಗವೂ ಹೌದು. ಜೀವನೋಪಾಯದ ಸಾಧನವೂ ಹೌದು.

ಹೀಗೆ ೭೦ರ ದಶಕದಲ್ಲಿ ಮೂಡಿಬಂದ ಸಿದ್ಧಲಿಂಗಯ್ಯನವರು ಕವನಗಳು ಶತಮಾನಗಳಿಂದ ಶೋಷಣೆಗೆ ಒಳಗಾಗಿ, ಸಂಕೋಲೆಯಲ್ಲಿ ಬಂಧಿತರಾಗಿ ಮೂಕರಂತೆ ಕುಳಿತಿದ್ದ ಜನತೆಯನ್ನು ಬಡಿದೆಬ್ಬಿಸಿ ಅವರನ್ನ ಒಂದುಗೂಡಿಸಿ ಒಂದು ಹೊಸ ಕ್ರಾಂತಿಗೆ ನಾಂದಿ ಹಾಡಲು ಪ್ರೇರೇಪಿಸಿದವು. ಜೊತೆಗೆ ದಲಿತ ಸಂಸ್ಕೃತಿಯೂ ಶ್ರೇಷ್ಠ ಎಂಬ ಭಾವನೆ ಬೆಳೆಸಿದವು. ಇಂತಹ ಚಾರಿತ್ರಿಕ, ಸಾಹಿತ್ಯಕ್ಕೆ ಮತ್ತು ಸಾಂಸ್ಕೃತಿಕ ಮಹತ್ವವುಳ್ಳ ಸಿದ್ಧಲಿಂಗಯ್ಯನವರ ಕವನಗಳ ವಿವಿಧ ಮಜಲುಗಳನ್ನು ಅರಿಯುವ ಉದ್ದೇಶದಿಂದ ಮತ್ತು ಅವುಗಳ ಮೇಲೆ ಕೊಂಚ ಬೆಳಕು ಬೀರುವ ಆಶಯದಿಂದ ನಾನು ನನ್ನ ಪ್ರಬಂಧದ ವಸ್ತುವಾಗಿ ಸಿದ್ಧಲಿಂಗಯ್ಯನವರ ಕವನಗಳನ್ನು ಆರಿಸಿಕೊಂಡಿದ್ದೇನೆ. ಈ ಪ್ರಬಂಧದ ಶೀರ್ಷಿಕೆ 'ಸಿದ್ಧಲಿಂಗಯ್ಯನವರ ಕಾವ್ಯಗಳಲ್ಲಿ ಭಾಷೆ–ಒಂದು ಅಧ್ಯಯನ'.

# ಅಡಿ ಟಿಪ್ಪಣಿ

೧. ಕನ್ನಡದಲಿತ ಸಾಹಿತ್ಯ (ಸಂ) ಡಾ॥ ಅರ್ಜುನಗೊಳಸಂಗಿ, ಬಿ.ಎನ್.ಮಲ್ಲಿಕಾರ್ಜುನಸ್ವಾಮಿ, ಕರ್ನಾಟಕ ಸಾಹಿತ್ಯ ಅಕಾಡೆಮಿ, ಕನ್ನಡ ಭವನ ಜೆ.ಸಿ.ರಸ್ತೆ, ಬೆಂಗಳೂರು-೨೦೦೩. ಪು.ಸಂ: ೫

೨. ದಲಿತಮಾರ್ಗ (ಸಂ) ಡಾ॥ಅರವಿಂದ ಮಾಲಗತ್ತಿ, ಶೈಲ ಪ್ರಕಾಶನ, ವಿಜಾಪುರ, ೧೯೮೧. ಪು.ಸಂ:೧೩೦

೩. ದಲಿತಮಾರ್ಗ (ಸಂ) ಡಾ॥ಅರವಿಂದ ಮಾಲಗತ್ತಿ, ಶೈಲ ಪ್ರಕಾಶನ, ವಿಜಾಪುರ, ೧೯೮೧. ಪು.ಸಂ:೬೬

೪. ದಲಿತಮಾರ್ಗ (ಸಂ) ಡಾ॥ಅರವಿಂದ ಮಾಲಗತ್ತಿ, ಶೈಲ ಪ್ರಕಾಶನ, ವಿಜಾಪುರ, ೧೯೮೧. ಪು.ಸಂ:೬೫

೫. ಸಂಸ್ಕೃತಿ ಕಥನ, ಡಾ॥ಡಿ.ಆರ್.ನಾಗರಾಜ್, ಅಕ್ಷರ ಪ್ರಕಾಶನ, ಹೆಗ್ಗೋಡು (ಸಾಗರ), ೨೦೦೦. ಪು.ಸಂ:೪೭೦

೬. ಬಡವರ ನಗುವಿನ ಶಕ್ತಿ, (ಸಂ) ಎಸ್.ದಂಡಪ್ಪ, ಅಂಕಿತ ಪುಸ್ತಕ, ಬೆಂಗಳೂರು, ೨೦೦೧, ಪು.ಸಂ:೯೮

೭. ಬಡವರ ನಗುವಿನ ಶಕ್ತಿ, (ಸಂ) ಎಸ್.ದಂಡಪ್ಪ, ಅಂಕಿತ ಪುಸ್ತಕ, ಬೆಂಗಳೂರು, ೨೦೦೧, ಪು.ಸಂ:೨೮

೮. ಮೆರವಣಿಗೆ, ಡಾ॥ಸಿದ್ಧಲಿಂಗಯ್ಯ, ಅಂಕಿತಪುಸ್ತಕ, ಬೆಂಗಳೂರು, ೨೦೦೦, ಪು.ಸಂ:೧೧೯

೯. ಬಡವರ ನಗುವಿನ ಶಕ್ತಿ, (ಸಂ) ಎಸ್.ದಂಡಪ್ಪ, ಅಂಕಿತ ಪುಸ್ತಕ, ಬೆಂಗಳೂರು, ೨೦೦೧, ಪು.ಸಂ:೯೪

೧೦. ಮೆರವಣಿಗೆ, ಡಾ॥ಸಿದ್ಧಲಿಂಗಯ್ಯ, ಅಂಕಿತಪುಸ್ತಕ, ಬೆಂಗಳೂರು, ೨೦೦೦, ಪು.ಸಂ:೩೧

೧೧. ಮೆರವಣಿಗೆ, ಡಾ॥ಸಿದ್ಧಲಿಂಗಯ್ಯ, ಅಂಕಿತಪುಸ್ತಕ, ಬೆಂಗಳೂರು, ೨೦೦೦, ಪು.ಸಂ:೧೦೧

೧೨. ಮೆರವಣಿಗೆ, ಡಾ॥ಸಿದ್ಧಲಿಂಗಯ್ಯ, ಅಂಕಿತಪುಸ್ತಕ, ಬೆಂಗಳೂರು, ೨೦೦೦, ಪು.ಸಂ:೧೦೧

# ಅಧ್ಯಾಯ–೨

## ಹೊಲೆ ಮಾದಿಗರ ಹಾಡು: ಗ್ರಾಮ್ಯ ಭಾಷೆಯ ಬಾಹುಳ್ಯ (೧೯೭೫)

ಸಿದ್ಧಲಿಂಗಯ್ಯನವರ ಮೊದಲ ಕವನ 'ಹೊಲೆಮಾದಿಗರ ಹಾಡು' ಕವನವು ೧೯೭೫ರಲ್ಲಿ ಬರೆದಂತಹ ಕಾವ್ಯವಾದರೂ ಈ ಸಮಯ ಆಧುನಿಕ ಸಾಹಿತ್ಯಕ್ಕೆ ಅಡಿಪಾಯ ಎನ್ನಿಸಿದರೂ, ಇವರ ಬರಹ ಜನಪದ ಶೈಲಿ ಮತ್ತು ಗ್ರಾಮ್ಯ ಭಾಷೆಯ ಸ್ವರೂಪವನ್ನು ಹೋಲುತ್ತದೆ.

*"ಇಕ್ರಲಾ ವದೀರ್ಲಾ*
*ಈ ನನ್ ಮಕ್ಕಳ ಚರ್ಮ ಎಬ್ರಲಾ*
*ಎಲ್ಲಾರು ದೇವ್ರ ಮಕ್ಳು ಅಂತಾರೆ*
*ಹೊಲೇರ ಕಂಡ್ರೆ ಹಾವ್ ಕಂಡಂಗಾಡ್ತಾರೆ"*[೧]

ಮೇಲಿನ ಕವನದಲ್ಲಿ ಕಂಡುಬರುವ ಪದಗಳನ್ನು ಗಮನಿಸಿದಾಗ ವಾಕ್ಯ ರಚನೆ ಇದೆ. ಇಲ್ಲಿ ಕವನವನ್ನು ಬರೆಯುವುದಕ್ಕೋಸ್ಕರ ಮಾತ್ರ ಪದಗಳ ರಚನೆಯನ್ನು ಮಾಡಿಕೊಂಡಿದ್ದಾರೆ. ಇಕ್ರಲಾ, ವದೀರ್ಲಾ, ಇಂತಹ ಪದಗಳು ಅವಿದ್ಯಾವಂತ ಮತ್ತು ಭಾಷೆಯ ನಾಗರೀಕತೆ ಇಲ್ಲದವರು ಬಳಸುವಂತಹ ಸಂದರ್ಭವನ್ನು ತೋರಿಸುತ್ತದೆ ಎನಿಸಿದರೂ ಅವರ ಆಕ್ರೋಶ ಎಂತಹದು ಎಂಬುದನ್ನು ಕವನದ ಭಾಷೆ ವ್ಯಕ್ತಪಡಿಸುತ್ತದೆ. ಈ ಕವನ ಸಂಕಲನದಲ್ಲಿ ಹೆಚ್ಚಾಗಿ ಉತ್ಪ್ರೇಕ್ಷೆ ಕಂಡು ಬರುತ್ತದೆ.

*"ಕ್ವರುಗ್ತಿನಿ ಕ್ವನೆಗೊಂದ್ಸಲ ಕೂಗ್ತಿನಿ*
*ಬಡ್ಡೀ ಮುಡ್ನೋನ್ ಬಂಗ್ಲಿ ಕ್ಯಳ್ಗೆ*
*ತಳಾದೀಗ ಸಿಕ್ಕೆರೋ ವೇಳೆ*
*ನೆಲನಾಸ್ಕಂಡು ಬಾಣಾನೊದ್ಕೊಂಡು*
*ಈ ಮಿಂಡ್ರುಗುಟ್ಟೋರ್ ಚಂದಾಗ್ ಬದ್ಕಾಕ್*
*ಮದ್ದು ಮೂಳೆ ಆಗಿ ಕ್ವಳಿತಿದ್ದೀನಿ*
*ಎಪ್ಪಾ ದಿನಾ ಈ ಪುಟ್ಕೋಸಿಗಳಾಟ?"*[೨]

'ಒಂದು ಮೊಳೆಯ ಹಾಡು' ಕವನದಲ್ಲಿ ಕವಿ ಬಳಸಿ ಕೊಂಡಿರುವ ಭಾಷೆ ಗ್ರಾಮ್ಯ ಭಾಷೆಯಾದರೂ, ಕವನದ ಅರ್ಥ ಬಡವನ ಬದುಕಿನ ಆಕ್ರೋಶವನ್ನು ವ್ಯಕ್ತಪಡಿಸುತ್ತದೆ. ಕ್ವರುಗ್ತಿನಿ, ಕ್ಯಳ್ಗೆ, ಕ್ವಳಿತಿದ್ದಿನಿ, ಪುಟ್ಕೋಸಿಗಳಾಟ ಎಂಬಿತ್ಯಾಧಿ ಪದ್ಯಗಳನ್ನು ಗಮನಿಸಿದಾಗ ಗ್ರಾಮ್ಯತೆ ಕೂಡಿರುವುದನ್ನು ಕಾಣಬಹುದು.

ಸಾವಿರಾರು ಕವನದಲ್ಲಿ ಕೆಲವೊಂದು ಕವನಗಳನ್ನು ಗಮನಿಸಿದರೆ ಕವಿಯ ಪರಿಸರದ ಭಾಷೆಯನ್ನು ಎತ್ತಿ ತೋರಿಸುತ್ತದೆ, ಮಾಗಡಿ ತಾಲ್ಲೂಕಿನ ಮಂಚನಬೆಲೆಯ ಸುತ್ತ–ಮುತ್ತಲಿನ ಭಾಷೆಯನ್ನು ಎಡಬಿಡದೆ ಬಳಸಿಕೊಂಡಿದ್ದಾರೆ.

ಕವನದ ಉದ್ದಕ್ಕೂ ಕೂಡ 'ಇ' ಕಾರ ಮತ್ತು 'ಎ' ಕಾರದ ಬಳಕೆಯನ್ನು ಕಾಣಬಹುದು, ಹಾಗೂ 'ಡ' ಕಾರ ಮತ್ತು 'ಟ' ಕಾರಗಳಿಲ್ಲದ ಸಾಲುಗಳೇ ಇಲ್ಲ. ಇದನ್ನು ಕವನಗಳಲ್ಲಿ ಗುರ್ತಿಸಬಹುದು.

ಹೊಲೆಮಾದಿಗರ ಹಾಡು ಕವನ ಸಂಕಲನದುದ್ದಕ್ಕೂ ಕೂಡ ರೋಷ, ಭೀತಿಗಳನ್ನು ಕವಿ ಪರಿಣಾಮಕಾರಿಯಾಗಿ ಹಿಡಿದಿಟ್ಟಿದ್ದಾರೆ.

*"ಅಲ್ಲಿ ಒಬ್ಬ ಪೈಲ್ವಾನ್ ತ್ವಡೇ ಭುಜ ತಟ್ಕಂಡು ಒಬ್ಬ ಬಡ್ಡೀ ಮಗನ್ನ ಎಳ್ಕಂಡು*
*ಬಡಬಡನ ಓಡೋಡಿ ಅಡ್ ಬೀಲ್ತಿದ್ದಂಗೆ*
*ಡೊಳ್ಳೊಟ್ಟೆ ಕುಳ್ಳ ಹಲ್ಲುದ್ರ್ದ ಅಜ್ಜ ಇನ್ನೊಬ್ಬ ಸಕ್ಕತ್ ಗೊಂಡು*
*ಇವ್ರು ಓಡ್‌ಬಂದು ಪೈಲ್ವಾನನ್ನ ಎಳೆದಾಕಿ, ನುಗ್ಗಿ*
*ಅಡುಗೂಲಜ್ಜಿ ಕಾಲು, ಕೈ, ಸ್ವಂಟ, ನೆರೆಕೂದ್ಲು*
*ಇತ್ಯಾದಿಗಳನ್ನು ನೆಕ್ಕಿ ನೆಕ್ಕಿ ಚಪ್ಪರಿಸಿ ಕ್ಯಾಕಹಾಕಿ ಮುಂದಕ್ಕಳುಸ್ತಾರೆ."*[2]

ಗ್ರಾಮ್ಯದಿಂದ ಶಿಷ್ಟದೆಡೆಗೆ ಹೆಜ್ಜೆಇಟ್ಟಿರುವ ಇವರ ಕಾವ್ಯ ಭಾಷಾ ಶೈಲಿ ಕಥೆಯ ರೂಪವನ್ನು ಹೋಲುತ್ತದೆ.

*“ಬಾಯಲ್ಲ ಭ ಕುತಿ ಹಣೆಯಲ್ಲ ನಾಮೆ*
*ಹ್ಯಾಂಡದಂತ ಮಾತು*
*ಕನಿದ ಕೋಟೆಯಲ್ಲಿ ದಾನಕ್ಕೆ ಸಾವು*
*ವಳಗೆಲ್ಲ ಕ್ವಳಕು ತೂತು.”*[೪]

ಹೋಲೆಮಾದಿಗರ ಹಾಡು ಕವನ ಸಂಕಲನದಲ್ಲಿ ಹೆಚ್ಚು ಹೆಚ್ಚಾಗಿ ಗ್ರಾಮ್ಯ ಭಾಷೆಯನ್ನು ಬಳಸಿಕೊಂಡಿರುವುದು ಇಲ್ಲಿನ ತನಕ ಮೇಲೆ ವಿವರಿಸಿದ ಪದ್ಯದ ಸಾಲುಗಳಿಂದ ತಿಳಿದು ಬರುತ್ತದೆ.

ಮೇಲಿನ ಸಾಲುಗಳಲ್ಲಿ ಕೆಲವು ಕಡೆ ತದ್ಭವಗಳನ್ನು ಬಳಸಿಕೊಂಡಿದ್ದಾನೆ. ಕಲವು ಕಡೆ ಸಮಾಸ ಪದಗಳು ಕಂಡುಬರುತ್ತವೆ, ಕವನಗಳಲ್ಲಿ ಕೊಳಕು ಎಂಬ ಮಾತುಗಳು ತೀರಾ ಹಳ್ಳೀ ಜನಾಂಗದವರನ್ನು ಎತ್ತಿ ತೋರಿಸುತ್ತದೆ.

*“ಬಡ್ಡೀಮಕ್ಕಳ್ನ ಕ್ರಾಂತಿಕಾರಿಗಳ ಕೋರ್ಟಿಗೆಳೀತೀನಿ*
*ಮಾರ್ಕ್ಸ್‌ನಿಂದ ಜಡ್ಜಮೆಂಟ್ ಕೊಡುಸ್ತೀನಿ*
*ಆವುರ್ಗೆ ಪಾನಿ ಆಯ್ತದೆ.”*[೫]

ಹಸಿವಿನ ಆಕ್ರೋಶವೆ ಕಾವ್ಯದ ಕಟ್ಟಡವನ್ನಾಗಿಸಿಕೊಂಡು ಬರೆದಂತಹ ಕವನಗಳೇ ಹೆಚ್ಚು ಕವನಗಳ ಭಾಷೆ ವ್ಯಂಗ್ಯವನ್ನು ವ್ಯಕ್ತಪಡಿಸುವಂತದ್ದು, ಮಾರ್ಕ್ಸ್‌ನಿಂದ ಜಡ್ಜಮೆಂಟ್ ಕೊಡುಸ್ತೀನಿ ಎಂಬ ಪದಗಳು ಆಕ್ರೋಶವನ್ನು ವ್ಯಕ್ತಪಡಿಸಿದರು. ಇಡೀ ಪದ್ಯದ ಅರ್ಥವೇ ವ್ಯಂಗ್ಯ ಎನ್ನಿಸಿಕೊಳ್ಳುತ್ತದೆ.

*“ಸೂಳೆಯರಿಲ್ಲದ ನಾಡೊಂದು ನಾಡೆ?*
*ಹದವಾದ ಚರ್ಮವ ಹಾರಾಗಿಟ್ಟು ಜನವ ಬದುಕಿಸಿದ*
*ಕರ್ನಾಟ್ಕ ರತ್ನಸಿಂಹಾಸನಾಧೀಶ್ವರ*
*ಕನಸಿನಲ್ಲಿ ಕಂಡು ಸಲುಗೆಯ ಮಾತಾಡಿದವಳೆ*
*ನಿನ್ನ ಕೀರ್ತಿ ಕಡಿಮೆಯೇನೆ?”*[೬]

ಬರ-ಬರುತ್ತಾ ಆಕ್ರೋಶದಿಂದ ಅಸಮದಾನದತ್ತ ಹಾಗೂ ಬರವಣಿಗೆಯು ಶಿಷ್ಟತೆಯೆಡೆಗೆ ಜಾರುತ್ತಿದೆ ಎಂಬುದುದಕ್ಕೆ 'ಕನ್ನಡದ್ವನಿಗೆ' ಎಂಬ ಕವನ ಉದಾಹರಣೆಯಾಗಿದೆ.

"ಕಟ್ಟೋತಕ ನೀವು ಬೇಕು ಕಟ್ಟೋದ್‌ಮ್ಯಾಲೆ ಕುಂತಿದ್ದೋರು

*ಗುಡಿವಳ್ಗೆ ಅದ್ರಸ್ಕಂಡು ನಿಂತುಬಿಟ್ಟವ್ರ*

*ದುಡುದೋರು ಮನಸ್ರಲ್ಲವ?"*[೭]

ಕವಿಯ ಆಸೆ ಕೈಗೂಡಿದರೆ ಕ್ರಾಂತಿಯನ್ನೆ ವಿವಾಹವಾಗುವುದರ ಮೂಲಕ ಹಾಗೂ ಕ್ರಾತಿಯೇ ಜೀವನದ ಉಸಿರು ಎಂದು ಕ್ರಾಂತಿಯನ್ನ ಕನ್ಯೆ, ಕ್ರಾಂತಿಯೆಂಬುದೇ ಮೋಹದ ಜನ್ಯೆ ಎಂದು ಹೇಳುತ್ತಾರೆ.

ಗ್ರಾಮಭಾಷೆಯಿಂದ ಆಧುನಿಕ ಭಾಷೆಯತ್ತ ದಿಟ್ಟ ಹೆಜ್ಜೆಯನ್ನಿಡುತ್ತಿದ್ದಾರೆ. ಕ್ರಾಂತಿಯೇ ಉಸಿರು ಹೋರಾಟವೇ ಬದುಕು ಎಂದಿರುವರು. ಕೊನೆಗೆ ನಿಷ್ಠುರತೆಯೆಡೆಗೆ ದಾಪುಗಾಲಿಟ್ಟಿದ್ದರೆ.

ಈ ಮೇಲಿನ ಕವನದಲ್ಲಿ ಕವಿ ಸಮಾಸಪದಗಳನ್ನು ಬಳಸಿಕೊಂಡಿದ್ದಾರೆ, ಕಿರಿದಾದ+ಮೋಡ ಕಾರ್ಮೋಡ, ರಸಗಳನ್ನು ಬಳಸಿಕೊಂಡಿದ್ದಾರೆ, ಹಾಗೆ ನಾಮಪದಗಳ ಬಳಕೆ ಕವನಗಳಲ್ಲಿ ಕಂಡುಬರುತ್ತದೆ.

ಕವಿ ಭಾಷೆಯಲ್ಲಿಯೂ ಕೂಡ ಸಮಾಸ, ನಾಮಪದ, ಹಾಗೂ ವಾಕ್ಯಗಳನ್ನು ಅರ್ಥ ಪೂರ್ಣವಾಗಿ ಬಳಸುತ್ತಾ ಭಾಷೆಯ ಆಧುನಿಕತೆಯತ್ತ ಬರವಣಿಗೆಯನ್ನು ಸಾಗಿಸಿದ್ದಾರೆ.

*"ಸನ್ನೆ ಗುದ್ಲಿ ತಗಂಡು*

*ದೆವ್ವುಳ್ ವಚಿಟಂಗ್ ಹೋಗ್ಬೇಕು*

*ಕುಂಟೆ ಕಿತ್ತಂಗ್ ಕೇಳ್ಬೇಕು*

*ಏರೂ ಪೇರೂ ನ್ಯಾರಮಾಡಿ*

*ಬಾಡ್ ತಿಂದಂಗ್ ನಗ್ಬೇಕು."*[೮]

ಈ ಕವನದಲ್ಲಿ ತದ್ಭವ ಮತ್ತು ಪ್ರಾಸ ಪದಗಳನ್ನು ಬಳಸಿಕೊಂಡಿದ್ದಾರೆ. ಸನ್ನೆ ಎಂಬ ಪದ. ಸಂಜೆ ಎಂಬ ಅರ್ಥವನ್ನು ಪಡೆದು ಕೊಂಡಿದೆ. ಸಾಲುಗಳಲ್ಲಿ ಕೊನೆಯಲ್ಲಿ ಹೋಗ್ಬೇಕು, ಕೇಳ್ಬೇಕು, ವಡಿಬೇಕು, ನಗ್ಬೇಕು, ಎಂಬ ಪದಗಳು ಪ್ರಾಸಬದ್ಧವಾಗಿದೆ.

“ದೈವ ಮತವ ಮುಂದೆ ಮಾಡಿ
ನಮಗೆ ಮೋಸ ನಡೆದಿದೆ
ಅನ್ಯಾಯಕೆ ಅನ್ಯಾಯ
ಮುಯ್ಯಿಗೆ ಮುಯ್ ಮುಂದಿದೆ.”[೯]

ವೈವತ್ಸದಿಂದ ಅನುಕರಣೆಯ ಪದಗಳತ್ತ ಪದ್ಯಗಳು ಮುಂದುವರಿದಿರುವುದನ್ನು ಕಾಣಬಹುದು.

ಸಿದ್ಧಲಿಂಗಯ್ಯನವರು ಅಂದು ಯಾವ ವೇದಿಕೆಯ ಮೇಲೆ ನಿಂತು ಕವನ ಕಹಳೆಯನ್ನು ಊದಿದರೋ ಇಂದು ಅದೇ ವೇದಿಕೆಯ ಮೇಲೆ ನಿಂತು ಅನೇಕ ವಿಮರ್ಶಕರು ಅಥವ ಹೊಸ ತಲೆಮಾರಿನ ಹೋರಾಟಗಾರರು ಸಿದ್ಧಲಿಂಗಯ್ಯನವರು ನಿಷ್ಕ್ರಿಯಗೊಂಡಿದ್ದಾರೆ ಮತ್ತು ಅವರ ಹೋರಾಟದ ಮನೋಭಾವ ಕುಗ್ಗಿದೆ ಎಂದು ಹೇಳುತ್ತಿದ್ದಾರೆ. ಬಹುಶಃ ಕಾರಣ ಇಲ್ಲ ಆದರೆ ಮೇಲಿನ ಅಪವಾದಗಳ ಅಂತರಾಳದ ಒಳಗೆ ಇಣುಕಿ ನೋಡಿದಾಗ ಸಿದ್ಧಲಿಂಗಯ್ಯನವರು ಅಂಬೇಡ್ಕರ್ ಕುರಿತು ಬರೆದ

*“ಮಹಾರಾಷ್ಟ್ರದ ಮಣ್ಣಿನಲ್ಲಿ*
*ಮೂಡಿ ಬಂದ ಗುಡುಗು ಸಿಡಿಲೆ*
*ಮಳೆಯ ನೇಕೆ ತಾರಲಿಲ್ಲ*
*ಮಿಂಚು ಮಾಯ ಅಷ್ಟೇಯೆ?”*[೧೦]

ಎಂಬ ಹಾಡಿನಲ್ಲಿ ಅಂಬೇಡ್ಕರ್‌ರವರು ಅನಿರೀಕ್ಷಿತ ನಿರ್ಗಮನವನ್ನು ಕುರಿತು ವ್ಯಥೆಪಟ್ಟಿರುವಂತೆ ಮೇಲಿನ ವಿಮರ್ಶಕರ ವ್ಯಥೆಯೂ ಆಗಿರಬಹ್ಮದೆಂಬ ಮನೋಭಾವನೆ ಬರುತ್ತದೆ. ಹಾಗೆಯೇ ಮತ್ತೊಂದು ಗಮನಿಸಬೇಕಾದ ಅಂಶವೆನೆಂದರೆ ಯಾವ ಒಂದು

ಸಂಘಟನೆಯ ಸ್ವರೂಪಗಳೂ ನಿಂತ ನೀರಲ್ಲ. ಅವು ಕಾಲದಿಂದ ಕಾಲಕ್ಕೆ ತಮ್ಮ ಹೋರಾಟದ ಸ್ವರೂಪವನ್ನು ಬದಲಾಯಿಸಿಕೊಳ್ಳುತ್ತಿರುತ್ತವೆ.

ಕವಿಯ "ಹೊಲೆಮಾದಿಗರ ಹಾಡು" ಕವನ ಸಂಕಲನವು ಸಾಹಿತ್ಯದ ಎರಡನೆಯ ಘಟಕದಲ್ಲಿ ಕಂಡು ಬಂದಿರುವಂತದ್ದು. ಇವರ ಮೊದಲ ಕವನ ಸಂಕಲನ ಹಾಗೂ ದಲಿತರ ದೀವಿಗೆ ಮತ್ತು ದಲಿತ ಕಾವ್ಯದ ಮೊಟ್ಟ ಮೊದಲ ಕವನ ಹೊಲೆಮಾದಿಗರ ಹಾಡು.

ಇವರ ಕಾವ್ಯಗಳ ಭಾಷೆ ದಲಿತರ ಜೀವನ ಸ್ಥಿತಿಯನ್ನು ಮನ ಮಿಡಿಯುವಂತೆ ಚಿತ್ರಿಸಿದ್ಧಾರೆ. ಶೋಷಿತ ನೆಲೆಯಿಂದ ಬಂದ ಕವಿಗೆ ತನ್ನವರ ಕರಾಳ ಬದುಕಿನ ತೀವ್ರತೆಯನ್ನು ಹೇಳುವ ತೀವ್ರ ತುಡಿತವಿದೆ. ಆದರೆ ಆ ಜನರ ನೋವಿಗೆ ಕಾರಣಗಳನ್ನು ಹುಡುಕುತ್ತಾ ಅವರನ್ನು ಶೋಷಣೆಯ ವಿರುದ್ಧ ಎಚ್ಚರಿಸುತ್ತಾ, ತನ್ನ ಕವಿಯ ಮೂಲಕ ಚಿಕಿತ್ಸಕ ಮನೋಭಾವನೆಯನ್ನು ಬೆಳೆಸಿ, ಆ ಮೂಲಕ ಪ್ರತಿಭಟನೆಗೆ ಪ್ರೇರೆಪಿಸುತ್ತಾ ಶೋಷಣೆ ಮಾಡುವವರ ಧಿಮಾಕಿನ ನಡುವಳಿಕೆಯನ್ನ ತಮ್ಮ ಕವಿತೆಗಳಲ್ಲಿ ದಾಖಲಿಸುತ್ತಾ ದಲಿತರನ್ನ ಅಧಿಕಾರದೆಡೆಗೆ ಮುನ್ನುಗ್ಗಲು ಪ್ರೇರೇಪಿಸುವುದೇ ಇವರ ಕಾವ್ಯ ಭಾಷೆಯ ವೈಶಿಷ್ಟ್ಯ.

ಹೀನ ಸ್ಥಿತಿ ಕಂಡ ಕವಿ ಅದರ ಬಗ್ಗೆ ಮೆರುಗುತ್ತಾ "ನನ್ನ ಜನಗಳು" ಕವನದಲ್ಲಿ ಅದನ್ನ ಅತ್ಯಂತ ಮಾರ್ಮಿಕವಾಗಿ ಎಲ್ಲರ ಹೃದಯ ಕರಗುವಂತೆ ಚಿತ್ರಿಸಿದ್ದಾರೆ. ಅದುವರೆಗೂ ಯಾವ ಜನಗಳು ಸಾಹಿತ್ಯಕವಾಗಿ ಮತ್ತು ಸಾಂಸ್ಕೃತಿಕವಾಗಿ ಕಡೆಗಣಿಸಲ್ಪಟ್ಟಿದ್ದರೂ ಅವರೇ ಇಂದು ಈ ಕವನದ ವಾರಸುದಾರರು.

ಏಕೆಂದರೆ ಕಡೆಗಣಿಸಲ್ಪಟ್ಟವನಿಂದ ಮಾತ್ರ ಸಾಧ್ಯ ಕಡೆಗಣಿಸಲ್ಪಟ್ಟ ಜನತೆಯ ನೋವು ಮತ್ತು ಅವರ ಅದಮ್ಯ ಆಕಾಂಕ್ಷೆಗಳನ್ನು ಸಾರಲು ಅಥವಾ ಮಂಡಿಸಲು ಅವರ ಕವನದ ಕೆಲವು ಭಾಗಗಳನ್ನ ಗಮನಿಸೋಣ.

*" ಹಸಿವಿನಿಂದ ಸತ್ತೋರು ಸೈಜುಗಲ್ಲು ಹೊತ್ತೋರು*
*ವದೆಸಿಕೊಂಡು ವರಗಿದೋರು ನನ್ನ ಜನಗಳು*
*ಕಾಲು ಕಯ್ಯಿ ಹಿಡಿಯೋರು ಕೈ ಮಡಗಿಸಿಕೊಳ್ಳೋರು*

*ಭಕ್ತರಪ್ಪ ಭಕ್ತರೋ ನನ್ನ ಜನಗಳು*

*ಹೊಲವನುತ್ತು ಬಿತ್ತೋರು ಬೆಳೆಯ ಕುಯ್ದು ಬೆವರೋರು*

*ಬಿಸಿಲಿನಲ್ಲಿ ಬೇಯೋರು ನನ್ನ ಜನಗಳು*

*ಬರೀಗೈಲೇ ಬಂದೋರು ಉಸ್ಸೆಂದು ಕೂತೋರು*

*ಹೊಟ್ಟೆ ಬಟ್ಟೆ ಕಟ್ಟಿದೋರು ನನ್ನ ಜನಗಳು*

*ಚಿನ್ನವನ್ನು ತೆಗೆಯೋರು ಅನ್ನವನ್ನ ಕದೋರು*

*ಬಟ್ಟೆಯನ್ನು ನೇಯೋರು ಬರಿ ಮೈಲೀ ಹೋಗೋರು*

*ಗಾಳಿಯಲ್ಲಿ ಬಾಳುತ್ತಾರೆ ನನ್ನ ಜನಗಳು"[೧೧]*

ಈ ಇಡೀ ಕವನ ದಲಿತರ ಜೀವನಕ್ಕೆ ಹಿಡಿದ ಕನ್ನಡಿ. ಜೊತೆಗೆ ಇದು ನೋವಿನ ತಳಹದಿಯ ಮೇಲೆ ನಿಂತಿರುವಂತ ಕವನ. ಇಲ್ಲಿ ಕ್ರೂರ ವ್ಯವಸ್ಥೆಯ ವಿರುದ್ಧ ಕೆಂಡ ಕಾರುವ ಅಬ್ಬರತನವಿಲ್ಲ. ಬದಲ್ಲಗಿ ಸೌಮ್ಯತೆ ಇದೆ. ದಲಿತರ ಬದುಕನ್ನ ನೇರವಾಗಿ ಬಿಂಬಿಸುವ ನೈಜತೆ ಇದೆ. ಜಾನಪದ ಲಯಗಳು, ಮೇಳೈಸಿವೆ, ನಿರಾಭರಣ, ಸುಂದರಿಯಂತೆ ಇಡೀ ಕವನದ ಸಾಲು ಸಾಲುಗಳೂ ಸಹ ಮೃದು ಭಾಷೆಯಿಂದ ಕೂಡಿ ಮನ–ಮನಗಳನ್ನು ಮುಟ್ಟುತ್ತದೆ. ಬಹುಶಃ ಇದಕ್ಕಾಗಿಯೇ ಇದು ಜನಪದ ಕವಿತೆಯಾಗಿ ಜನ ಸಮೂಹದ ಕವಿತೆಯಾಗಿ ಮಾರ್ಪಾಟುಗೊಂಡಿರುವುದು.

ದಲಿತರ ಜೀವನಕ್ಕೆ ಶಾಪವಾಗಿ ಬಂದಿರುವಚಿತಹುದು (ಹಸಿವು) ಆ ಹಸಿವಿಗೆ ಕಾರಣ ಕಿತ್ತು ತಿನ್ನುವ ಬಡತನ. ಈ ಬಡತನದಿಂದಾಗಿ ತಮ್ಮ ಹಸಿವು ನಿಗಿಸಲು ಕೂಲಿಗೆ ಹೋಗುವುದು ಕಟ್ಟಿಟ್ಟಬುತ್ತಿ. ಈ ಕೂಲಿಯ ಕಾರಣದಿಂದಾಗಿ ಸಾಹುಕಾರರ ಹಟ್ಟಿಯಲ್ಲಿ ಜೀತಕ್ಕೆ ನಿಂತು, ಸೈಜುಗಲ್ಲು ಹೊತ್ತು, ಅವರು ಹೇಳಿದಂತೆ ಕೇಳಿಕೊಂಡು ಒದ್ದರೂ ವದೆಸಿಕೊಂಡು, ವದೆದವರನ್ನೇ ದೇವರೆಂದು ನಂಬುವ ಮಹಾನ್ ಭಕ್ತರು ಈ ಜನಗಳು ಬಿಸಿಲು, ಚಳಿ, ಮಳೆಗಾಲವೆನ್ನದೆ ದಣಿಯರ ಹೊಲದಲ್ಲಿ ದುಡಿದು ದಣಿದವರೆಷ್ಟೋ, ಅವರಿಗೆ ಮೊಳಿಗೆ, ಬಂಗಲೆಗಳನ್ನು ಕಟ್ಟಿ ತಳಾದಿಗೆ ಸಿಕ್ಕಿ ಸತ್ತವರೆಷ್ಟೋ, ಬೀದಿಗೆ ಬಿದ್ದು ಅಸಮಾನತೆಗೆ ಸಿಲುಕಿ ಅತ್ತವರೆಷ್ಟೋ.

ಸ್ವಾತಂತ್ರ್ಯ ಬಂದ ನಂತರ ದಲಿತರ ಬದುಕು, ಸರಿ ಹೋಗುತ್ತದೆ ಎಂದು ಕೊಂಡಿದ್ದ ಜನತೆಗೆ ಅದು ಬರೀ ಸುಳ್ಳು ಬೊಗಳೆಗಳ ಭಾಷಣಕ್ಕಷ್ಟೇ ಸೀಮಿತವಾಯಿತು. ದೇವರು ದೇವರು ಎಂದು ಹೇಳುತ್ತಾ ಈ ದೇಶದಲ್ಲಿ ಅಸಮಾನತೆಯ ಬೀಜಗಳನ್ನು ಬಿತ್ತುತ್ತಾ ಪರಮಾನ್ನವನ್ನು ಉಣ್ಣುವಂತಹಜನಗಳೀಗೆ ಬೂಟು-ಮೆಟ್ಟುಗಳನ್ನು ಒಲಿಯುವಂತವರು ಈ ದಲಿತರು. ಇವರಿಗೆ ಅನ್ನವಿಲ್ಲ, ಬಟ್ಟೆಗಳನ್ನು ನೇಯುವವರು ಇವರು ಆದರೆ ಇವರಿಗೆ ಬಟ್ಟೆಯಿಲ್ಲ, ಧಣಿಯರು ಹೇಳಿದಂತೆ ಕೇಳಿಕೊಂಡು ಬದುಕುವಂತವರು.

ಇತಿಹಾಸದ ಪುಟಗಳಲ್ಲಿ ಅವರ ಇತಿಹಾಸವಿಲ್ಲ, ಸಾಹಿತ್ಯದ ಆಗಾಧತೆಯಲ್ಲಿಅವರ ನೋವಿನ ಒಂದು ಎಳೆಯಿಲ್ಲ, ಆದರೆ ಬೀಸುವ ಗಾಳಿಯನ್ನು ಕೇಳಿದರೆ ಇವರ ಇತಿಹಾಸವನ್ನು ಸಾರುವುದಂತು ನಿಜ, ಏಕೆಂದರೆ ಇವರ ಮಿಡಿತ-ತುಡಿತಗಳೆಲ್ಲಾ ಗಾಳಿಯಲ್ಲಿ ವಿಲೀನಗೊಂಡಿದೆ.

ಇಲ್ಲಿ ಕವಿಗೆ ದಲಿತ ಇತಿಹಾಸ ಗೊತ್ತಿದೆ. ಚಾರಿತ್ರಿಕ ಅಂಶಗಳ ತಿಳುವಳಿಕೆಯಿದೆ, ಜಿಲಾತೆಗೆ ಪರಂಪರಾನುಗತವಾಗಿ ನೋವಿನಲ್ಲೇ ಹುಟ್ಟಿ ನೋವನ್ನೇ ತಿಂದು ನೋವಿನಲ್ಲೇ ಬದುಕಿ, ನೋವಿನಲ್ಲೇ ಸತ್ತಂತಹ ಜನರ ಬಗೆಗಿನ ಅರಿವಿದೆ. ಆದ್ದರಿಂದಲೇ ಈ ಕವನ ಉತ್ಕೃಷ್ಟವಾಗಿರುವುದು ಮತ್ತು ಜನಮನದಲ್ಲಿ ನೆಲೆನಿಂತಿರುವುದು.

ಕವಿ ತಮ್ಮ ಕಾವ್ಯದುದ್ದಕ್ಕೂ ಕೇವಲ ಪುರುಷ ಪ್ರಧಾನ ನೆಲೆಯಿಂದ ಮಾತ್ರ ಯೋಚಿಸಿಲ್ಲ, ಹೆಂಗಸರುಗಳಿನ ಮನಮಿಡಿತದ ಬಗ್ಗೆಯೂ ಚಿಂತನಾಶೀಲರಾಗಿದ್ದಾರೆ. ಏಕೆಂದರೆ ದಲಿತ ಹೆಣ್ಣುಗಳ ಜೀವನ ಬರ್ಬರತೆಯು ಅವರ ಕಣ್ಣ ಮುಂದಿದೆ.

*"ಹರಿದ ಸೀರೆಯ ಅಂಚು ಸುಳಿವ ಗಾಳಿಗೆ ತೂರಿ*
*ಅಡಗಿದ್ದ ತೊಡೆಗಳನ್ನು ತೋರುತ್ತಿತ್ತು*
*ಚಿಂದಿ ಕುಬಸವು ತನ್ನ ಒಲವು ಒಂದೊಡೆ ತೂರಿ*
*ವರ್ಷಗಳ ದರ್ಶನವ ಮೂಡಿಸಿತ್ತು"*[೧೨]

ಎನ್ನುವ ಸಾಲುಗಳು ಒಬ್ಬ ನೊಂದ ಹೆಣ್ಣುಮಗಳ ಚರಿತ್ರೆಯಾಗಿದೆ. ಬಡತನದ ಬೇಗೆಗೆ ತತ್ತರಿಸಿ ಹರಿದ ಸೀರೆ, ಚಿಂದಿ ಕುಬಸ ತೊಟ್ಟ ಹೆಣ್ಣಿನ ಚಿತ್ರಣ ಈ ಸಾಲುಗಳು ಅತ್ಯಂತ

ಮಾರ್ಮಿಕವಾಗಿ ಸೆರೆ ಹಿಡಿದಿವೆ. ಅಷ್ಟೇ ಅಲ್ಲ ಅವಳು ಉಟ್ಟ ಸೀರೆ ಗಾಳಿಗೆ ಎತ್ತೆತ್ತಲೋ ಹಾರಿ ಬಡತನದ ಬಾವುಟವಾಗಿ ಹಾರುತ್ತಿರುವುದು ಇಡೀ ಭಾರತದ ಸಾಮಾಜಿಕ ವ್ಯವಸ್ಥೆಯ ಕಡೆಗೆ ತೋರುವ ತೋರು ಬೆರಳಾಗಿದೆ.

ಇಲ್ಲಿನ ಭಾಷಾ ಓದುಗನಿಗೆ ಹಲವು ಸಂಕೇತ ಮತ್ತು ರೂಪಕಗಳನ್ನು ಕಣ್ಣಿಗೆ ಕಟ್ಟುವಂತೆ ಕವಿ ಚಿತ್ರಿಸಿದ್ದಾರೆ.

*ಮುಂದೆ ಅದೇ ಹೆಣ್ಣಿನ ಹೀನ ಸ್ಥಿತಿಯನ್ನು ಹೇಳುತ್ತಾ*

*"ಕಾಲ್ಗೆ ಮೆಟ್ಟುಗಳಿಲ್ಲ ಕೈಗಳಿಗೆ ಬಳೆಯಿಲ್ಲ,*
*ಮೈಯೆಲ್ಲ ಬೆವರದ್ದು ನಾರುತ್ತಿತ್ತು,*
*ಬವಣೆಯೇ ಬೆಂದತನು ಕೊಳೆಯ ಗೆಳತನ ಮೂಡಿ*
*ಮೂಳೆಯುಳಿದಿವೆ ಎಂದು ಸಾರುತ್ತಿತ್ತು"*[೧೩]

ಒಂದು ಹೆಣ್ಣಿನ ಕರಾಳ ಬದುಕಿನ ನೆಲೆಯನ್ನು ಸೆರೆಹಿಡಿಯುವಲ್ಲಿ ಇದಕ್ಕಿಂತ ಸಾಲುಗಳು ಬೇಕೆ? ಅವಳ ಬದುಕಿನ ಅಂತರಾಳ ನೋವುಗಳನ್ನ ಇಡೀ ಕವನ ಸ್ಪುಟ ಸ್ಪುಟವಾಗಿ ಬಿತ್ತರಿಸುತ್ತದೆ. ಅಂತಿಮವಾಗಿ ಕವಿ ಅವಳ ಕಣ್ಣಿನಲ್ಲಿ ಮಿನುಗುತ್ತಿದ್ದ ಈ ಬಾಳಿನಲ್ಲಿ ಎಂದಿಗಾದರೂ ಒಳಿತು ಸಿಗುತ್ತದೆ ಎಂಬ ಆಶಾಭಾವನೆಯನ್ನು ಗಮನಿಸದೆ ಇರಲಿಲ್ಲ.

ದಲಿತರ ಬದುಕಿನ ನೈಜತೆಯನ್ನು ಕಟ್ಟಿಕೊಡುವುದರಲ್ಲಿ ಸಿದ್ದಲಿಂಗಯ್ಯನವರ ಬರವಣಿಗೆ ಬಲು ಸೂಕ್ಷ್ಮ, ಬಹಳ ಸರಳ ನಿರೂಪಣೆಯಿಂದಲೇ ಸಾವಿರಾರು ಮನಸ್ಸುಗಳು ನೆಲೆಯನ್ನು ಗೋಚರಿಸುವಂತಹ ಶಕ್ತಿ ಇವರಿಗಿದೆ.

*"ಕಷ್ಟ ಪಟ್ಟು ದುಡಿದರೆನು*
*ನಮಗೆ ಕೂಳು ದೊರೆಯದು*
*ದುಡಿಯದಿರುವ ಯಜಮಾನರ*
*ಮನವ ಹೇಳ ತೀರದು"*[೧೪]

ಎಂಬ ಸಾಲುಗಳು ದುಡಿದು ಜನರ ಸಂಕಟ, ದುಡಿಯದ ಜನರ ಉತ್ಕಟ ಎರಡನ್ನೂ ಸರಳ ನಿರೂಪಣೆಯಲ್ಲೇ ಪರಿಣಾಮಕಾರಿಯಾಗಿ ಚಿತ್ರಿಸಿವೆ. 'ಕೂಳಿಲ್ಲದೆ ಕೊರಗುವವರು ನಾವು ಹಸಿದ ಹುಲಿಗಳು' ಎಂಬ ಮಾತುಗಳು ಹಸಿವಿನ ತೀವ್ರತೆಯನ್ನು ಬಿಂಬಿಸಿದರೆ_________

*'ಉಪದೇಶವು ನಮಗೆ ಬೇಡ*

*ಬೇಕು ನಮಗೆ ಅನ್ನವು............*

ಎಂಬ ಮಾತುಗಳು ಇಡೀ ದಲಿತರಿಗೆ ಮೂಲಭೂತ ಅವಶ್ಯಕತೆಗಳಲ್ಲಿ ಕೊರತೆ ಇರುವುದರ ಬಗ್ಗೆ ಗಮನ ಸೆಳೆಯುತ್ತದೆ.

ಸ್ವಾತಂತ್ರ್ಯದ ಪೂರ್ವದಲ್ಲಿ ಹೀನ ಸ್ಥಿತಿಯಲ್ಲಿ ಬದುಕುತ್ತಿದ್ದಂತಹ ಜನತೆಗೆ ಸ್ವಾತಂತ್ರ್ಯವಾದರೂ ಬೆಳಕು ಚೆಲ್ಲಬಲ್ಲದು ಎಂದು ಕೊಂಡರೆ ಅದು ಕೂಡ ಬಡವರ ಪಾಲಿಗೆ ಮುಳ್ಳಾಯಿತು. ಇದನ್ನ ಮುಂದಿನ ಕವನ ಸಂಕಲನದ ಕವನಗಳಲ್ಲಿ ಬಳಹ ಸೊಗಸಾಗಿ ಚಿತ್ರಿಸುತ್ತಾ ಸ್ವಾತಂತ್ರ್ಯಾನಂತರದಲ್ಲಿ ದಲಿತರು ಯಾವ ರೀತಿ ದಿಕ್ಕು ಗೆಟ್ಟರು ಎಂಬುದನ್ನು ನೈಜವಾಗಿ ಚಿತ್ರಿಸುತ್ತದೆ.

"ಸ್ವಾತಂತ್ರ್ಯವೆಂಬುದು ಸಾಹುಕಾರರ ಮಡಿಲಲ್ಲಿ ಸೆಲೆಸಿಕ್ಕಿ ನಿಂತಾಗ ಹಸಿವೆಯೆಂಬುದು ಬಡವನ ಬಾಳಾಗದೆ ಇರದು ಎಂಬುವುದನ್ನು ಕವನದ ಭಾಷೆಯಲ್ಲಿ ಮನಮುಟ್ಟುವಚಿತೆ ಚಿತ್ರಿಸಿರುವುದು ಕವಿಯ ಸೂಕ್ಷ್ಮ ಭಾಷಾ ವೈಶಿಷ್ಟವಾಗಿದೆ."

ಕವಿ ರಾಜಕೀಯ ವ್ಯಕ್ತಿಗಳನ್ನ ತನ್ನದೆ ಆದ ಕವನದ ಭಾಷೆಯಲ್ಲಿ ಗ್ರಾಮ್ಯರೂಪದಲ್ಲಿ ಹೀಗೆ ಮೂಡಿಸಿದ್ದಾರೆ. ಒಂದು ವ್ಯವಸ್ಥೆಯ ಮುಖ್ಯ ಸೂತ್ರಧಾರಿಗಳಂತೆ ವರ್ತಿಸುವ ರಾಜಕೀಯ ಮುಖಂಡರ ಭೋಗ ವಿಲಾಸಿ ಜೀವನವನ್ನ ಕಂಡ ಕವಿ ಅವರನ್ನ ತರಾಟೆಗೆ ತೆಗೆದುಕೊಂಡಿದ್ದಾರೆ. ಬದುಕಿನ ವಿಲಾಸಿ ಜೀವನಕ್ಕೆ ಮೊರೆ ಹೋಗಿ ಕೆಳವರ್ಗದ ಜನತೆಗೆ ತಪ್ಪು ಮಾರ್ಗದರ್ಶನ ಮಾಡುವ ರಾಜಕಾರಣಿಗಳನ್ನು ಕುರಿತು ಹೀಗೆ ಹೇಳುತ್ತಾರೆ.

"ಬಡೂರುದ್ಧಾರೋಕ್ಸ್ಕರ

ಭಜ್ನೆ ಮಾಡಕ್ ಗುಡಿ ಕಟ್ಟುಸ್ಕೊಟ್ಟು

ನಿಮ್ಗೆ ಬಂಗ್ಲೆ ಕಟ್ಟುಸ್ಕತ್ತೀರೇನ್ರೋ

ನಿಂ ನಿಂ ಸೀಟ್ಗಾಗಿ ಕ್ವಲೆ ಮಾಡ್ಸುದು ನಮ್ಗೆ ಮಾತ್ರ

ನೀತಿ ಆಂಹಿಸೆ ಹೇಳ್ಕೊಡ್ತೀರೆನ್ರಲಾ

ಗಾಂಧಿ ಮಾತ್ಮನ ಆಚ್ಚುಗಳಾ

ನೀವು ಎಮ್ಮೆ ಲ್ಲೆಗಳು ಮಿನಿಷ್ಟ್ರುಗಳು"[೧೫]

ಎಂದು ಇಡೀ ವ್ಯವಸ್ಥೆಯನ್ನ ಎತ್ತಿ ತೋರಿಸುತ್ತಾ ಈ ರೀತಿಯ ಬೊಗಳೆ ದಾಸರಾಗಿರುವ ಅಧಿಕಾರಿಗಳು, ಮುಂದೊಂದು ದಿನ ಜನತೆಯ ಪ್ರಶ್ನೆಗಳಿಗೆ ಉತ್ತರಿಸಲಾಗದೆ ತೊಡೆ ನಡುಗಿ ಸಾಯುತ್ತಾರೆ ಎಂಬ ಭವಿಷ್ಯವನ್ನು ನುಡಿದು ಈ ಅಸಮಾನತೆಯನ್ನೇ ಕ್ರಾಂತಿಯ ಮೆಟ್ಟಿಲನ್ನಾಗಿ ಮಾಡುವ 'ಕ್ರಾಂತಿಪದ' ಬರೆದು ಮೇಲಿನ ಶೋಷಕರ ಸಮಾಜಕ್ಕೆ ಮೊದಲ ಎಚ್ಚರಿಕೆಯ ನುಡಿಗಳನ್ನಾಡುತ್ತಾರೆ ಗ್ರಾಮ್ಯ ಭಾಷೆಯ ರೂಪದಲ್ಲಿ.

ಸಿದ್ಧಲಿಂಗಯ್ಯನವರು ತಮ್ಮ ವ್ಯಂಗ್ಯದ ಮಾತುಗಳ ಮೂಲಕವೇ ತಮ್ಮ ಕಾವ್ಯದಲ್ಲಿ ಮೇಲ್ವರ್ಗದವರ ಸಂಸ್ಕೃತಿ, ಆಚಾರ–ವಿಚಾರ, ನಡೆ–ನುಡಿ, ದೇವರು, ರೀತಿ–ನೀತಿ ನಂಬಿಕೆ ಮುಂತಾದವುಗಳಲ್ಲಿರುವ ಪೊಳ್ಳು ಡಾಂಬಿಕತನಗಳನ್ನು ಎತ್ತಿ ಹಿಡಿದು ಆ ಮೂಲಕ ಮುಂತಾದವುಗಳಲ್ಲಿರುವ ಇಡೀ ವ್ಯವಸ್ಥೆಗೆ ಒಂದು ತಿರುವನ್ನು ಕೊಡಲು ಪ್ರಯತ್ನಿಸಿದ್ದಾರೆ, ನಿಮ್ಮ ಸಂಸ್ಕೃತಿಯ ಪೊಳ್ಳು ಆದರ್ಶಗಳಿಗಿಂತ ಹೆಂಡ–ಬಾಡು ತಿಂದು ಪ್ರಾಮಾಣಿಕತೆಯಿಂದ ಬದುಕುವ ನಮ್ಮ ಸಂಸ್ಕೃತಿಯೇ ಶ್ರೇಷ್ಠ ಎಂಬುದು ಮೂಲತಃ ದಲಿತ ವರ್ಗದಿಂದ ಬಂದಂತಹ ಕವಿಯ ನಿಲುವು. ಇದು ಕೇವಲ ಕವಿಯದಷ್ಟೇ ಅಲ್ಲ ಅದು ಸಮುದಾಯದ ನಿಲುವು.

ಒಂದು ಜಾತಿಯ ಶ್ರೇಷ್ಟತೆ ಮತ್ತು ಕನಿಷತೆಯಲ್ಲಿ ಧರ್ಮವೂ ಪ್ರಮುಖ ಪಾತ್ರ ವಹಿಸುತ್ತದೆ. ಈ ಧರ್ಮದ ಸುಳಿಗೆ ಸಿಲುಕಿದವರು ನಾನಾ ವೇಷವ ತೊಟ್ಟು ದೇವ ಮಾನವರಂತೆ ಗುರುತಿಸಿಕೊಂಡು ಉನ್ನತ ಮಟ್ಟದಲ್ಲಿ ಬದುಕಲು ಪ್ರಯತ್ನಿಸುತ್ತಾರೆ. ಇದನ್ನು ಕಂಡ ಕವಿ ಹೃದಯ

*"ಸುಂಟರಗಾಳಿಗೆ ಸಿಕ್ಕ ಥರಥರಗುಡುವ*
*ಗುರುಮಠದ ಧ್ವಜದಲ್ಲಿ ಧರ್ಮವಿಲ್ಲ,*
*ಮೂಳೆ ತುಂಬಿದ ಹಣೆಗೆ ಸೊಟ್ಟ ಸೊಟ್ಟಗೆ ಬಳಿದ*
*ನಾಮ ವಿಭೂತಿಯಲ್ಲಿ ಧರ್ಮವಿಲ್ಲ*
*ದಕ್ಷಿಣೆಯ ರುಚಿಯುಂಡು ಉಬ್ಬಿರುವ ಒಡಲಿನಲಿ*
*ಜುಟ್ಟು ಜನಿವಾರದಲಿ ಧರ್ಮವಿಲ್ಲ*
*ಊದುಕಡ್ಡಿಯ ಆರೆದು ಮೇಲೆದ್ದ ಧೂಮದಲ್ಲಿ*
*ಧರ್ಮಸುಳಿ ಸುಳಿಯಾಗಿ ಸುಳಿಯುವುದಿಲ್ಲ."*[೧೬]

ಇಲ್ಲಿ ದಲಿತನೊಬ್ಬನ ರೋಷಗೊಂಡ ವ್ಯಂಗ್ಯಪೂರಿತ ಮಾತುಗಳು ಮೇಳೈಸಿವೆ. ಏಕೆಂದರೆ, ಗುರು ಮಠ, ಜುಟ್ಟು ಜನಿವಾರ, ಊದುಕಡ್ಡಿ, ನಾಮವಿಭೂತಿ ಮುಂತಾದವುಗಳು ಎಲ್ಲೋ ಒಂದು ಕಡೆ ದಲಿತನ ಶೋಷಣೆಗೆ ಪ್ರತ್ಯಕ್ಷ ಸಾಕ್ಷಿಗಳಾಗಿ ನಿಲ್ಲುವುದನ್ನು ಕಾಣಬಹುದು ಆದ್ದರಿಂದ ಈ ರೀತಿ ಶೋಷಣೆಗೊಂಡ ಒಬ್ಬ ಮನುಷ್ಯ ಆ ವ್ಯವಸ್ಥೆಯೊಳಗಿನ ದೌರ್ಬಲ್ಯವನ್ನು ಗುರುತಿಸಿ 'ಸುಂಟರಗಾಳಿ ಸಿಕ್ಕಿ ಥರ ಥರ ಗುಡುಡುವ ಗುರುಮಠದ ಧ್ವಜದಲಿ ಧರ್ಮವಿಲ್ಲ ಎಂದು ಇಡೀ ವ್ಯವಸ್ಥೆಯನ್ನು ಕಾವ್ಯದ ಭಾಷೆಯ ಹತೋಟಿಗೆ ತಂದು ತಮ್ಮ ಹಿಡಿತದಲ್ಲಿಟ್ಟುಕೊಳ್ಳಲು ಹವಣಿಸುತ್ತಿರುವ ಎಲ್ಲಾ ಧರ್ಮ ಗುರುಗಳ ವಿರುದ್ಧ ಕಾರಿದ ವ್ಯಂಗ್ಯದ ಮಾತುಗಳಿವು. ಕೇವಲ ಜುಟ್ಟು ಜನಿವಾರಗಳಿದ್ದ ಮಾತ್ರಕ್ಕೆ ತಾವು ಶ್ರೇಷ್ಠರೆಂದು ಭಾವಿಸುತ್ತಿರುವ ಬ್ರಾಹ್ಮಣರ ವಿರುದ್ಧ, 'ದಕ್ಷಿಣೆಯ ರುಚಿಯುಂಡು ಉಬ್ಬಿರುವ ಒಡಲಿನಲಿ ಜುಟ್ಟು ಜನಿವಾರದಲಿ ಧರ್ಮವಿಲ್ಲ' ಎಂದು ಹೇಳಿರುವ ಮಾತು ಅರ್ಥಗರ್ಭಿತ.

ಕವಿ ಕೇವಲ ಇಷ್ಟಕ್ಕೇ ಸುಮ್ಮನಾಗುವುದಿಲ್ಲ ಬದಲಾಗಿ ಮಾನವತೆಯನ್ನೊಳಗೊಂಡ ನಿಜವಾದ ಧರ್ಮಎಲ್ಲಿದೆ ಎಂದು ಹುಡುಕಿ ಅದು ಸ್ಫೋಟಗೊಳ್ಳುವ ಸಂದರ್ಭವನ್ನು ಮುಂದಿನ ಕವನಗಳಲ್ಲಿ ಅವರದೆ ಕಾವ್ಯದ ಗಮತ್ತಿನಲ್ಲಿ ಬರೆಯುತ್ತ ಹೋಗುತ್ತಾರೆ.

'ಹೊಲೆಮಾದಿಗರ ಹಾಡು'ವಿನಿಂದ ಶುರುವಾಗಿ ತೀರಾ ಈಚಿನ ತನಕ ಸಿದ್ಧಲಿಂಗಯ್ಯನವರ ಕಾವ್ಯವನ್ನು ಈ ಶತಮಾನದ ದಲಿತರ, ಕೆಳಜಾತಿಗಳ ಆತ್ಮ ಪ್ರತಿನಿಧೀಕವಾದ ಮೂರು ಪ್ರಧಾನ ಆಶಯಗಳೂ ರೂಪಿಸಿದುವು.

ಹೊಸರೀತಿಯ ಪ್ರಜ್ಞಾವಂತ ದಲಿತ ತನ್ನ ಭೂತ ಮತ್ತು ವರ್ತಮಾನವನ್ನು ಕಾಣುತ್ತಿದ್ದ ಕ್ರಮ ಅವು. ಈ ಕಾರಣಕ್ಕಾಗಿ ಕವಿಯ ಕಾವ್ಯ ದಲಿತರ ಪ್ರಣಾಳಿಕೆಯಂತಾಗಿ ನಾಡಿನಾದ್ಯಂತ ದಲಿತ ಯುವಜನಾಂಗ ಅದನ್ನು ಗುಣಗುಣಿಸುತ್ತಿದ್ದದ್ದು ಸಾಮಾನ್ಯವಾದ ದೃಶ್ಯವಾಗಿತ್ತು. ಈ ಆಶಯಗಳನ್ನು ಹೀಗೆ ಸಂಗ್ರಹಿಸಬಹುದು.

೧. ದಲಿತರಿಗೆ ಶೋಷಣೆಗೆ, ದಮನಗಳಿಂದ ಹೊರತಾದ ಬೇರೆ ಸಾಂಸ್ಕೃತಿಕ ಸ್ಮೃತಿಯೇ ಇಲ್ಲಾ ಎಂಬ ಚಾರಿತ್ರಿಕೆ ಗ್ರಹಿಕೆ ಇದಕ್ಕೆ ಹೊಂದಿಕೊಂಡಂತೆ ಹಿಂದೂ ಧರ್ಮ ಒಂದು ಏಕಕಾರೀ ರಚನೆ ಎಂಬ ನಿಲುವು.

೨. ಆತ್ಮಾನುಕಂಪ ಮತ್ತು ಆಕ್ರೋಶಗಳ ಎರಡು ಅಲೆಗಳಲ್ಲಿ ತುಯ್ಯಲಾಡುತ್ತಿದ್ದ ಮನೋ-ರಾಜಕೀಯ ಸ್ಥಿತಿ.

೩. ಚರಿತ್ರೆಯ ವಿಕಾಸ ಪಥದಲ್ಲಿ ಆಧುನೀಕರಣ ತಮ್ಮ ಬಿಡುಗಡೆಯ ಏಕಮಾತ್ರ ದಾರಿ ಎಂಬ ಆಶಾವಾದ, ಆದ್ದರಿಂದ ಆಧುನೀಕರಣಕ್ಕಿಂತ ಹೆಚ್ಚಾಗಿ ಪರಂಪರೆಯ ಬಗ್ಗೆ ಧಗಧಗಿಸುವ ಸಿಟ್ಟು.

ದಲಿತ ಸಮಾಜದ ನೋವನ್ನು ಉಂಡು-ಬೆಂದ ಕವಿ ತಮ್ಮ ಅನುಭವಗಳನ್ನು ಕಾವ್ಯದ ರೂಪದಲ್ಲಿ ಒಂದು ಭಾಷೆಯಾಗಿ ಹೊರತಂದಿರುವುದು ಕವಿಯ ವಿಶೇಷ ವಿಶಿಷ್ಟ ಶೈಲಿಯಾಗಿದೆ.

ಹೊರನೋಟಕ್ಕೆ ಕವಿಯ ಸಂಕಲನಗಳಲ್ಲಿನ ಕವನಗಳು ಹಾಡುಗಳಂತೆ ಕಂಡರು ಅವುಗಳ ಒಳಗಿನ ಅಂತಃ-ಸತ್ವವನ್ನು ಆಳವಾಗಿ ಗಟ್ಟಿಯಾಗಿ ಮನಸ್ಸನ್ನು ಕವನಕ್ಕೆ ಓಗೂಟ್ಟು ಓದಿದಾಗ ಮಾತ್ರ ಕವಿಯ ಭಾಷೆ ಓದುಗರಿಗೆ ಬೇಗ ಅರ್ಥವಾಗುತ್ತದೆ.

ಒೀಗೆ ಹೊಲೆಮಾದಿಗರ ಹಾಡು ಕವನ ಸಂಕಲನದ ಭಾಷಾ ಬಾಹುಳ್ಯವು ಗ್ರಾಮ್ಯತೆಯಿಂದ ಕೂಡಿರುವುದನ್ನ ಮೇಲಿನ ಕವನಗಳು ಚಿತ್ರಿಸುತ್ತವೆ.

# ಅಡಿ ಟಿಪ್ಪಣಿ

೧. ಮೆರವಣಿಗೆ, ಡಾ॥ಸಿದ್ಧಲಿಂಗಯ್ಯ, ಅಂಕಿತಪುಸ್ತಕ, ಬೆಂಗಳೂರು, ೨೦೦೦, ಪು.ಸಂ:೫೯

೨. ಮೆರವಣಿಗೆ, ಡಾ॥ಸಿದ್ಧಲಿಂಗಯ್ಯ, ಅಂಕಿತಪುಸ್ತಕ, ಬೆಂಗಳೂರು, ೨೦೦೦, ಪು.ಸಂ:೫೮

೩. ಮೆರವಣಿಗೆ, ಡಾ॥ಸಿದ್ಧಲಿಂಗಯ್ಯ, ಅಂಕಿತಪುಸ್ತಕ, ಬೆಂಗಳೂರು, ೨೦೦೦, ಪು.ಸಂ:೬೩

೪. ಮೆರವಣಿಗೆ, ಡಾ॥ಸಿದ್ಧಲಿಂಗಯ್ಯ, ಅಂಕಿತಪುಸ್ತಕ, ಬೆಂಗಳೂರು, ೨೦೦೦, ಪು.ಸಂ:೬೫

೫. ಮೆರವಣಿಗೆ, ಡಾ॥ಸಿದ್ಧಲಿಂಗಯ್ಯ, ಅಂಕಿತಪುಸ್ತಕ, ಬೆಂಗಳೂರು, ೨೦೦೦, ಪು.ಸಂ:೬೭

೬. ಮೆರವಣಿಗೆ, ಡಾ॥ಸಿದ್ಧಲಿಂಗಯ್ಯ, ಅಂಕಿತಪುಸ್ತಕ, ಬೆಂಗಳೂರು, ೨೦೦೦, ಪು.ಸಂ:೬೯

೭. ಮೆರವಣಿಗೆ, ಡಾ॥ಸಿದ್ಧಲಿಂಗಯ್ಯ, ಅಂಕಿತಪುಸ್ತಕ, ಬೆಂಗಳೂರು, ೨೦೦೦, ಪು.ಸಂ:೭೧

೮. ಮೆರವಣಿಗೆ, ಡಾ॥ಸಿದ್ಧಲಿಂಗಯ್ಯ, ಅಂಕಿತಪುಸ್ತಕ, ಬೆಂಗಳೂರು, ೨೦೦೦, ಪು.ಸಂ:೭೫

೯. ಮೆರವಣಿಗೆ, ಡಾ॥ಸಿದ್ಧಲಿಂಗಯ್ಯ, ಅಂಕಿತಪುಸ್ತಕ, ಬೆಂಗಳೂರು, ೨೦೦೦, ಪು.ಸಂ:೭೮

೧೦. ಮೆರವಣಿಗೆ, ಡಾ॥ಸಿದ್ಧಲಿಂಗಯ್ಯ, ಅಂಕಿತಪುಸ್ತಕ, ಬೆಂಗಳೂರು, ೨೦೦೦, ಪು.ಸಂ:೬೦

೧೧. ಮೆರವಣಿಗೆ, ಡಾ॥ಸಿದ್ಧಲಿಂಗಯ್ಯ, ಅಂಕಿತಪುಸ್ತಕ, ಬೆಂಗಳೂರು, ೨೦೦೦, ಪು.ಸಂ:೬೮

# ಅಧ್ಯಾಯ – ೩

## ಸಾವಿರಾರು ನದಿಗಳು: ಶಿಷ್ಟ ಭಾಷೆಯ ಕಡೆಗೆ–೧೯೭೯

"ಸಾವಿರಾರು ನದಿಗಳು" ಕವಿಯ ಎರಡನೆಯ ಕವನ ಸಂಕಲನವಾಗಿದೆ. ಈ ಕವನ ಸಂಕಲನದಲ್ಲಿ ಭಾಷಾ ಶೈಲಿ ಮತ್ತು ವಾಕ್ಯರಚನೆ ಹಾಗೂ ಭಾಷಾ ಸ್ವಚ್ಛತೆಯನ್ನು ಹೆಚ್ಚಿಸಿಕೊಂಡಿರೋದನ್ನು ಕಾಣಬಹುದು. ಮನಸ್ಸು ಬದಲಾದಂತೆ ಬರೆಯುವ ಲೇಖನಿಯು ಕೂಡ ಬದಲಾಗತೊಡಗಿದೆ. ಅವರ ಜೊತೆಗೆ ಸ್ಥಳ ಬದಲಾವಣೆಯಿಂದ ಮತ್ತು ಭಾಷೆ ಆಕರ್ಷಣೆ ಹೆಚ್ಚಾಗತೊಡಗಿದೆ.

*"ನೆನ್ನೆ ದಿನ*
*ನನ್ನ ಜನ*
*ಬೆಟ್ಟದಂತೆ ಬಂದರು."*[೧]

ಎಂಬ ಪದ್ಯದಲ್ಲಿ ಮೂಡಿ ಬಂದಿರುವ ವಾಕ್ಯರಚನೆ ಸರಳವಾಗಿದೆ, ಪದದೋಡನೆ ಮತ್ತು ಹೋಲಿಕೆಗಳನ್ನು ಅಂದರೆ ಅಲಂಕಾರಗಳನ್ನು ಬಳಸಿಕೊಂಡೆ ಕಾವ್ಯವನ್ನು ಬರೆಯುತ್ತಾ ಹೋಗಿದ್ದಾರೆ.

ಉದಾ: ಬೆಟ್ಟದಂತೆ – ಬೆಟ್ಟ–"ಅಂತೆ" ಇಲ್ಲಿ ಜನಗಳನ್ನು ಬೆಟ್ಟಕ್ಕೆ ಹೋಲಿಸಿರುವುದನ್ನು ಕಾಣಬಹುದು. ಇದು ಉಪಮಾಲಂಕಾರವನ್ನು ಗುರ್ತಿಸುತ್ತದೆ.

ಸಿದ್ಧಲಿಂಗಯ್ಯನವರ ಮುಂದಿನ ಕವನಗಳನ್ನು ಗಮನಿಸಿದಾಗ ಇಡೀ ಜಮೀನ್ದಾರಿ ವ್ಯವಸ್ಥೆಯು ದಲಿತರ ಮೇಲೆಯೇ ಅವಲಂಬಿತರಾಗಿ ನಿಂತಿದ್ದು ಅದೇ ಅವರ ಶೋಷಣೆಯ ಕೇಂದ್ರಬಿಂದುವಾಗಿರುವುದನ್ನು ಬಹಳ ಸಂಯಮದಿಂದ ದಾಖಲಿಸುತ್ತದೆ.

*"ದೊಡ್ಡಗೌಡರ ಬಾಗಿಲಿಗೆ*
*ನಮ್ಮ ಮೂಳೆಯ ತ್ವಾರಣ*
*ನಮ್ಮ ಜನಗಳ ಕಾಲು ಕಯ್ಯಿ*

*ಕಂಬ ಅವರ ಹಟ್ಟಿಗೆ*

*ಅವರ ಬೇಟೆಗೆ ನಾವು ಮೊಲಗಳು*

*ನಮ್ಮ ಬಾಳೇ ಬಂಗಲೆ*

*ಅವರ ಬಂಗಲೆಯಂಗಳಕ್ಕೆ*

*ನಮ್ಮ ರಕ್ತದ ರಂಗಾಲೆ"*[1]

ಈ ಪದ್ಯದಲ್ಲಿ ವಾಕ್ಯರಚನೆ ಸೂಚಾರ್ಥವಾಗಿ ಬಳಸಿಕೊಂಡಿದ್ದರೆ. ಇಲ್ಲಿ ಬಳಸಿಕೊಂಡಿರುವ ಪದಗಳು ಶಿಷ್ಟತೆಯಿಂದ ತುಂಬಿವೆ. ಸರಳ ಭಾಷೆಯನ್ನು ಬಳಸಿ ಕವನವನ್ನು ಬರೆದಿದ್ದಾರೆ.

ಈ ಕವನದ ಕೊನೆಯ ಸಾಲುಗಳು ಕವಿಯ ಮನೋಧರ್ಮಕ್ಕೆ ಹಿಡಿದ ಕನ್ನಡಿಯಾಗಿದೆ. ಕವಿಯು ದಲಿತರ ಬದುಕಿನ ಹೊಂಬೆಳಕಿಗಿ ಕಾತುರದಿಂದ ಕಾಯುತ್ತಿದ್ದಾರೆ. ಇಂತಹ ಮುಗ್ಧ ಜನಗಳು ನಿರಪರಾಧಿಗಳೂ ಆದ ಇವರಿಗೆ ಕತ್ತಲೆಯ ಬದುಕು ಕಳೆದು ಬೆಳಕಿನ ಬದುಕು ಕಾಣಲಾರರೆ ಎಂಬ ಆಶಯದೊಂದಿಗೆ ಕವನ ಮುಕ್ತಾಯವಾಗುತ್ತದೆ.

*"ಯಾವ ಮಾಯಾದ ನಿಷ್ಠೆ ಕವಿದಿತ್ತೊ ಇವರನ್ನು*

*ಯಾವ ಉಕ್ಕಿನ ಸರಳು ಬಿಗಿದಿತ್ತು ಇವರ*

*ಯಾವ ಬಣ್ಣದ ಬೀಗ ಮುಚ್ಚಿತ್ತೊ ಬಾಯನ್ನು*

*ಯಾವ ಮೋಡದ ಹಿಂಡು ತಡೆದಿತ್ತೊ ಬೆಳಕೆ"*[2]

ಎಂಬ ಕವನದಲ್ಲಿ ಪದಗಳು ಸರಳವಾಗಿ ಸುಲಲಿತವಾಗಿ ಮತ್ತು ಶಿಷ್ಟವಾಗಿ ಮೂಡಿಬಂದಿದೆ. ಹೋಲೆಮಾದಿಗ್ಗರ ಹಾಡು ಕವನ ಸಂಕಲನದಿಂದಿಚೆಗೆ ಭಾಷೆ ಶಿಷ್ಟತೆಯಿಂದ ಕೂಡಿದೆ. ಈ ಕಾವ್ಯವು ಸ್ವಲ್ಪಮಟ್ಟಿಗೆ ನವೋದಯದ ಕಾವ್ಯಗಳಿಗೆ ಹೋಲಿಕೆಯಾಗುತ್ತದೆ.

ಕಾವ್ಯದ ಮೊದಲ ಪದಗಳೆಲ್ಲಾ ಒಂದೇ ಅರ್ಥವನ್ನು ಕೊಡುವ ಒಂದೇ ಪದರೂಪಗಳಾಗಿರುತ್ತವೆ, ಸಾಲಿನ ಕೊನೆಯ ಪದಗಳೆಲ್ಲಾ ವಿಭಕ್ತಿ ಪ್ರತ್ಯಯಗಳಿಂದ ಕೂಡಿರುತ್ತದೆ.

ಉದಾ: ಇವರನ್ನು, ಬಾಯನ್ನು, ಎಂಬ ಪದಗಳು ದ್ವಿತೀಯ ವಿಭಕ್ತಿ ಪ್ರತ್ಯಯಗಳನ್ನು ಹೋಲುತ್ತದೆ.

ಸಾಲಿನ ಮದ್ಯದ ಪದಗಳು ಕಾಲವನ್ನು ಸೂಚಿಸುತ್ತವೆ. ಅಂದರೆ ಕವಿದಿತ್ತು, ಚಿಗಿದಿತ್ತು, ಮುಚ್ಚಿತ್ತೊ, ತಡೆದಿತ್ತೂ, ಎಂಬ ಪದಗಳು ಭೂತಕಾಲವನ್ನು ತಿಳಿಸುತ್ತದೆ.

ಸಾವಿರಾರು ನದಿಗಳು ಕವನ ಸಂಕಲನದಲ್ಲಿ ಭಾಷೆ ಶಿಷ್ಟತೆಯನ್ನು ತೊಟ್ಟಿದ್ದಾರೆ, ಸಮಯ–ಸಂದರ್ಭಗಳನ್ನು ಬಳಸಿಕೊಂಡು ಕವನಗಳ ಅಂದವನ್ನು ಹೆಚ್ಚಿಸಿಕೊಂಡಿದ್ದಾರೆ.

*"ಕೋಟಿ ಕೋಟಿ ಕನಸುಗಳೊಂದಿಗೆ*
*ಹತ್ತಿ ಉರಿಯುವ ಮನಸುಗಳೊಂದಿಗೆ*
*ಗುಡುಗು ಮಿಂಚಿನ ಘೋಷಣೆಯಲ್ಲಿ*
*ಭೂಕಂಪನ ಭಾಷೆಗಳಲ್ಲಿ*
*ಬಂತು ದಲಿತರ ಮೆರವಣಿಗೆ*
*ನೆಲಕೆ ಕಾಲುಗಳ ಬರವಣಿಗೆ"*[5]

ಈ ಮೇಲಿನ ಕವನದಲ್ಲಿನ ಭಾಷೆಯನ್ನು ಗಮನಿಸಿದಾಗ ಪ್ರತಿಮಾಲೋಕ ನೆನಪಿಗೆ ಬರುತ್ತದೆ. ಕೋಟಿಗಟ್ಟಲೆ ಕನಸುಗಳು ಎಲ್ಲರಿಗೂ ಸಹಜ ಆದರೂ ಕವಿ ಇಲ್ಲಿ ಕತ್ತಲು ಜನಕ್ಕೆ ಬೆಳಕು ಬೇಕು ಎಂಬುವುದನ್ನು ಎತ್ತಿ ಹಿಡಿಯುತ್ತಿದ್ದಾರೆ. ಕತ್ತಲೆ ಜನಗಳ ಧ್ವನಿ ಗುಡುಗು ಮಿಂಚುಗಳಿಗೆ ಹೋಲಿಸುತ್ತಾ ಭೂಕಂಪಗಳಂತಹ ಭಾಷೆಗಳಲ್ಲಿ ದಲಿತರು ಮುಂದೆ ಬರುತ್ತಿದ್ದಾರೆ. ದಾರಿ ಕಾಣದ ನೆಲಕೆ ಕಾಲುಗಳೆ ಬರವಣಿಗೆ ಎನ್ನುತ್ತಾರೆ. ಕವಿ ಅಂದರೆ ಅಂದಕಾರವೆಂಬ ಸಮುದ್ರದಲ್ಲಿ ಮುಳಿಗಿದ ಜನರಿಗೆ ಘೋಷಣೆ, ಭಾಷೆ, ಮೆರವಣಿಗೆ, ಇವುಗಳಿಂದ ಬರವಣಿಗೆಯ ಮಾರ್ಗವೇ ದೊರತಿದೆ ಎನ್ನುತ್ತಾರೆ.

ಕವನದ ಪ್ರತಿಯೊಂದು ಸಾಲಿನಲ್ಲಿಯೂ ಕೂಡ ಚತುರ್ಥಿ, ವಿಭಕ್ತಿ, ಮತ್ತು ಸಪ್ತಮಿ ವಿಭಕ್ತಿ ಪ್ರತ್ಯಯಗಳನ್ನು ಬಳಸಿಕೊಂಡಿರುವುದನ್ನು ಗಮನಿಸಬಹುದು.

ಕವನದ ಪ್ರತಿಯೊಂದು ಸಾಲಿನಲ್ಲಿಯೂ ಉತ್ಪ್ರೇಕ್ಷೆಯನ್ನು ಕಾಣಬಹುದು. ಹಾಗೂ ಭೂತ, ವರ್ತಮಾನ, ಭವಿಷ್ಯತ್ ಕಾಲಗಳನ್ನು ಕವನಗಳಲ್ಲಿ ಬಳಸಿಕೊಂಡಿರುವುದು ಕೂಡ ವ್ಯಕ್ತವಾಗುತ್ತದೆ.

ಈ ಕವನದ ಭಾಷೆ ಭೂಮಿಯೇ ಕಂಪನಗೊಳ್ಳುವ ಭಾಷೆ ಎನ್ನುತ್ತಾರೆ ಕವಿ ಇದು ಹೇಗೆ ಸಾಧ್ಯ ಎನ್ನುವುದು ಪ್ರಶ್ನೆಯಾದರೆ, ದಲಿತರ ಧ್ವನಿ ಕಂಪನದಂತಿದೆ ಎನ್ನುವುದು ಉತ್ತರವಾಗಿದೆ.

*"ಬಿದ್ದಾವು ಮನೆಗಳು ಬಿದ್ದವು ಹೆಣಗಳು*
*ಬಿದ್ದಾವು ತೆಂಗಿನ ಗರಿಗಳು ಅಣ್ಣಯ್ಯ*
*ಬಡವರ ಸಾವು ಆಯ್ತಲ್ಲೊ"*[೫]

ಹಿಂದೆ ಬರೆದಿರುವಂತಹ ಕವನಗಳ್ನ್ನ ನೋಡಿದಾಗ ಆಕ್ರೋಶವನ್ನು ಕಾಣಬಹುದು. ಆದರೆ ಮೇಲಿನ ಕವನದಲ್ಲಿ ದುಃಖವನ್ನು ವ್ಯಕ್ತಪಡಿಸುವಂತಹ ಕವನ ಇದಾಗಿದೆ.

ಮನೆಗಳು, ಹೆಣಗಳು, ಗರಿಗಳು, ಕೊನೆಗೆ ಸಾವು ಈ ಪದಗಳನ್ನು ಗಮನಿಸಿದಾಗ ನವ್ಯತೆ ಎಂಬುದು ಕಾಣುತ್ತದೆ.

ಭಾಷಾ ಶೈಲಿ ಬರ ಬರುತ್ತಾ ಬದಲಾಗತೊಡಗಿದೆ. ಪದಗಳ ರೂಪ ನಯದಿಂದ ಕೂಡಿದೆ ಓದುಗನಿಗೆ ಬಹುಬೇಗ ಅರ್ಥವಾಗುವಂತಿದ್ದು ನವ್ಯತೆಯನ್ನು ಗುರ್ತಿಸುವಂತಿದೆ.

*"ಗುಡಿಸಲು ಬೀಳುವಾಗ ಬಂಗಲೆ ನಗುತಿದ್ದೂ*
*ನಮ್ಮೂರ ಮೋರಿ ಹೆಣತುಂಬಿ ಹರಿಯಿತು*
*ರಕ್ತದ ಕೋಡಿ ಊರೆಲ್ಲ"*[೬]

ಇಡೀ ಕವನದ ತುಂಬೆಲ್ಲಾ ಉತ್ಪ್ರೇಕ್ಷೆ ಎದ್ದು ಕಾಣುತ್ತಿದೆ. ಊಹೆಗಳ ಸರಮಾಲೆ ಕವನವಾಗಿದೆ. ಎನ್ನಿಸಿದರೂ ಇಲ್ಲಿ ಗುಡಿಸಲು ಎಂಬುವುದು ಬಡವರನ್ನು ಸಂಕೇತವಾಗಿಸಿದೆ. ಹಾಗೆ ಬಂಗಲೆ ಎಂಬುವುದು ಶ್ರೀಮಂತರ ಸಂಕೇತವಾಗಿದೆ ಮತ್ತು ನೀರು ಹರಿಯುವಂತಹ

ಮೋರಿ ಹೆಣಗಳ ತೊಟ್ಟಿಯಾಗಿ ಊರೆಲ್ಲಾ ರಕ್ತದ ಮಡುವಾಗಿದೆ ಎಂಬ ಅರ್ಥವನ್ನು ಈ ಕವನ ವ್ಯಕ್ತಪಡಿಸುತ್ತಿದೆ.

ಕವಿಯು ತಮ್ಮ ಬರವಣಿಗೆಯಲ್ಲಿ ಬದಲಾವಣೆಯನ್ನು ತಂದಿರುವುದು ಈ ಮೇಲಿನ ಕವನಗಳಿಂದ ತಿಳಿದು ಬರುತ್ತದೆ.

*"ದೇಸಾಂತ್ರ ಹೋಗಿದ್ದ ಸಿದ್ದಯ್ಯ ಕತ್ತೀಯ*
*ಹೂತ ಜಾಗವ ನೋಡೊ ಆ ಸೇಲಿ ಬಂದವ್ನೆ*
*ಹುಡುಕುತ ನಿಂತವ್ನ ಹೊತಜಾಗ"*[2]

ಸಾವಿರಾರು ನದಿಗಳು ಕವನದಲ್ಲಿ ಶಿಷ್ಟ ಭಾಷೆಯನ್ನು ಬಳಸಿದರು ಒಂದೊಂದು ಕವನ ಆಡುಭಾಷೆಯ ರೀತಿಯಲ್ಲಿಯೇ ಇದೆ.

ದೇಸಾಂತ್ರ, ಬಂದವ್ನ, ನಿಂತವ್ನೆ, ಎಂಬ ಪದಗಳಲ್ಲಿ ಸ್ವಲ್ಪಮಟ್ಟಿಗೆ ಆಡುಭಾಷೆಯನ್ನು ಗುರ್ತಿಸುತ್ತವೆ. ಇನ್ನೂ ಕವನದ ಆಗೆಯೆ ಎಂದರೆ ಸಿದ್ಧಯ್ಯ ಕತ್ತೆಗಾಗಿ ಪಟ್ಟಪಾಡನ್ನು ಕವಿ ಕತ್ತೆಯನ್ನು ಸಂಕೇತವಾಗಿಟ್ಟುಕೊಂಡು ಕವನವನ್ನು ರಚಿಸಿದ್ದಾರೆ.

*"ಒಡೆಯರ ಸುಂದರ ತೋಟದ ಒಳಗೆ*
*ಅರಳುವ ಹೂವಿನ ದಳದಳದಲ್ಲಿ*
*ಅಪ್ಪನ ಬೇವರಿನ ರಕ್ತವು ಸೋರಿ*
*ಕೆಂಪಾದವು ಹೂವು"*[೮]

ಸಾವಿರಾರು ನದಿಗಳು ಕವನದಲ್ಲಿನ ಶಿಷ್ಟತೆಗೆ ಈ ಮೇಲಿನ ಎಲ್ಲಾ ಕವನಗಳು ಉದಾಹರಣೆಯಾಗಿವೆ. ಕವನದ ಅಥವಾ ಚರಣದ ಸಾಲುಗಳ ಮಧ್ಯದಲ್ಲಿ ಮತ್ತು ಮೊದಲು, ಕೊನೆಯಲ್ಲಿ ಪ್ರಾಸಪದಗಳನ್ನು ಗಮನಿಸಬಹುದು.

ಉದಾಹರಣೆಗೆ: ಹೂವಿನ, ಬೆವರಿನ, ಎಂಬಿತ್ಯಾದಿ ಪದಗಳು ಪ್ರಾಸ ಪದಗಳಾಗಿ ಮೂಡಿಬಂದಿವೆ.

ನವ್ಯ ಮತ್ತು ನವೋತ್ತರ ಸೊಗಡನ್ನು ತಮ್ಮ ಬರವಣಿಗೆಯಲ್ಲಿ ತಂದಿರುವುದನ್ನು ಕಾಣಬಹುದು.

“ಮಳೆರಾಯ ಕ್ವಾಪದಲಿ ದೇಸಂತರಾ ಹೋಗಿ
ಅಂದಾವೆ ಹೋಯಿತಲ್ಲೋ
ನಗುತ್ತಿದ್ದ ಮಲ್ಲಿಗೆಯ ಮಕದಲ್ಲಿ ಕಳಗುಂದಿ ಚಂದಾವೆ ಹೋಯಿತಲ್ಲೋ
ಚಂದಾವೆ ಹೋಯಿತಲ್ಲೋ.”[೯]

ಅಲ್ಲೆ ಕುಂತವರೆ ಕವನದಲ್ಲಿ ಮಿಶ್ರ ಸಾಹಿತ್ಯವನ್ನು ಕಾಣಬಹುದು. ಏಕೆಂದರೆ ಕಥೆಯ ರೀತಿ ಒಂದು ಚರಣವಾದರೆ ಮತ್ತೊಂದು ಚರಣ ಜನಪದ ಶೈಲಿಯನ್ನು ಒಳಗೊಂಡಿದೆ. ಇನ್ನೂ ಕೇಲವು ಚರಣಗಳು ಶಿಷ್ಟತೆಯಿಂದ ಕೂಡಿವೆ ಮತ್ತು ಪದ, ಮಾತು ಎಂಬ ರೀತಿಯಲ್ಲಿ ಒಡಮಾಡಿದೆ.

ಹೀಗೆ ‘ಪದ’ದಲ್ಲಿ ಬರುವ ಕಾವ್ಯದ ಈ ಸಾಲುಗಳು ಬರಗಾಲದ ಭೀಕರತೆಯನ್ನು ಕಲಾತ್ಮಕವಾಗಿ ರೂಪಿಸುತ್ತವೆ. ಮುಂದೆ ಬರುವ ‘ಮಾತು’ದಲ್ಲಿ ಅದು ಸ್ಪಷ್ಟವಾಗುತ್ತದೆ. ಸಿದ್ಧಲಿಂಗಯ್ಯನವರ ಕಾವ್ಯದ ಶೈಲಿ ವಿನೂತನವಾದುದು. ಅವರು ಕಾವ್ಯದ ಅನನ್ಯತೆಯನ್ನು ಬಿಟ್ಟು ಕೊಡದೆ ಸಾಮಾನ್ಯರಿಗೂ ತಿಳಿಯುವಂತೆ ಬರೆಯುತ್ತಾರೆ.

ಮಾತು:ಜನ ಸುತ್ತ ಮುತ್ತ ನೋಡ್ತರೆ

*“ಆಕಾಸ ನೋಡ್ತರೆ*
*ಬಡವರ ಮನೆ ಗುಂಡಿ ಬಿಂದ್ಗೆ*
*ಹಂಡೆ ಕಡಾಯಿಕಡ್ಗ ಎಲ್ಲ.”*[೧೦]

ಮೇಲೆ ವಿವರಿಸಿದಂತೆ ಈ ಮೇಲಿನ ಸಾಲುಗಳಲ್ಲಿ ಭೀಕರತೆಯನ್ನು ಕಾಣಬಹುದಾಗಿದೆ. ಪ್ರಾಸಪದಗಳ ಸರಮಾಲೆಯೇ ಕವನದ ಸ್ಪೂರ್ತಿ.

ಸಾವಿರಾರು ನದಿಗಳು ಕವನ ಸಂಕಲನದಲ್ಲಿನ ಕವನಗಳೆಲ್ಲಾವನ್ನು ಗಮನಿಸಿದಾಗ ಶಿಷ್ಟತೆಯೆಂಬುದು ಬರವಣಿಗೆಯೆ ಅಂದವನ್ನು ಹೆಚ್ಚಿಸಿದೆ ಮತ್ತು ಉತ್ತಮ ಬರವಣಿಗೆಯು ಸ್ಫೂರ್ತಿದಾಯಕವಾಗಿದೆ ಎಂದು ಹೇಳಬಹುದು.

ದಲಿತ ಕಾವ್ಯ ಏಕಕಾಲಕ್ಕೆ ಮೇಲೆ ಬರಲು, ಅಬ್ಬರವನ್ನು ಅಂತರಂಗದ ಸಂಕಟಕಗಳನ್ನು ಅಭಿವ್ಯಕ್ತಿಸಿದ ಕಾವ್ಯಮಾರ್ಗವಾಗಿದೆ. ಇಲ್ಲಿಯ ಓದು ಒಂದೇ ಕಾಲಕ್ಕೆ ಆಸಕ್ತಿ ಮತ್ತು ಆತಂಕಗಳನ್ನು ಹುಟ್ಟಿಸಲು ಇದೇ ಮುಖ್ಯಕಾರಣವಾಗಿದೆ.

ಕನ್ನಡ ಕಾವ್ಯ ಪರಂಪರೆಯಲ್ಲಿಯೇ ದಲಿತ ಕಾವ್ಯ ವಿಶಿಷ್ಟವಾಗಿ ಕಾಣಲು ಅದರ ವಸ್ತು ಹಾಗೂ ಅನುಭವಗಳು ಅದರ ವಸ್ತುವಾದರೆ, ಜನಪದ ಲಯಗಾರಿಕೆ ಹಾಗೂ ಆಡು ನುಡಿಯ ಸತ್ವ, ಅದರ ಅಭಿವ್ಯಕ್ತಿ ಕ್ರಮವಾಗಿದೆ ಎನ್ನಬಹುದು.

ಕವಿ ಕಾವ್ಯದ ವಸ್ತು ಹಾಗೂ ಅಭಿವ್ಯಕ್ತಿಯ ವೈಶಿಷ್ಟ್ಯತೆಯನ್ನು ಗುರುತಿಸಲು ಇಂತಹ ಹಲವಾರು ಕವಿತೆಗಳ ಸಾಲುಗಳನ್ನು ಉದಾಹರಿಸಬಹುದಾಗಿದೆ. ದಲಿತ ಕಾವ್ಯದ ತಾಜಾತನ ಇರುವುದು ಕೂಡ ಇಂತಹ ಕವಿತೆಗಳಲ್ಲಿಯೇ ಎಂಬುವುದನ್ನು ಮರೆಯುವಂತಿಲ್ಲ.

ಕವಿಯ ಒಳಗಿನ ಸಂಕಟ ಸದ್ದುಮಾಡಿ, ಸಪ್ಪಳಮಾಡಿ, ಜೋರಾಗಿ ಕೂಗಿದ ನಂತರ ಅದು "ಇಕ್ರಲಾ, ವದೀರ್ಲಾ" ಎಂಬಂತಹ ಆವೇಶದ ನುಡಿಗಳನ್ನಾಡುತ್ತದೆ. ತತ್‌ಕ್ಷಣವೇ ಅದು ಕಣ್ಣೀರಹೋಳೆಯಾಗುತ್ತದೆ. ಕರುಣೆಯ ಜಲವಾಗುತ್ತದೆ. ಆಗ ಅಲ್ಲಿ ಕಾವ್ಯ ಅರಳಿ ನಿಲ್ಲುತ್ತದೆ. ಬೆಟ್ಟದಲ್ಲಿಯ ಬೆಳದಿಂಗಳನ್ನು ಪುಟ್ಟ-ಪುಟ್ಟ ಪದ್ಯದ ಸಾಲುಗಳಲ್ಲಿ ತುಂಬಿಸಿಬಿಡುತ್ತದೆ.

ದಲಿತೇತರರಲ್ಲಿ ಹೆಚ್ಚಿನ ಕವಿಗಳು ಪರಂಪರೆಯನ್ನು ವೈಭವೀಕರಿಸಿ ಬರೆದರೆ, ದಲಿತ ಕವಿಗಳು ಪರಂಪರೆಯನ್ನು ಸಿಟ್ಟಿನಿಂದ ನೋಡುತ್ತಾರೆ. ಜಾತಿಯತೆಯ ದಳ್ಳುರಿಯಲ್ಲಿ, ಬಡತನದ ಬೇಗೆಯಲ್ಲಿ ಅಸಮಾನತೆಯ ನಾಡಿನಲ್ಲಿ ಅಸ್ಪೃಶ್ಯತೆಯ ಬೀಡಿನಲ್ಲಿ ಅವರ ಬದುಕ್ಕೇ ಕರುಕಲಾಗಿ ಹೋಗುತ್ತಿರುವಾಗ ಅವರಿಗೆ ಆಧುನಿಕರಣವೆಂಬುದು ಬಿಡುಗಡೆಯ ದಾರಿಯಾಗಿ ಕಾಣಿಸುತ್ತದೆ. ಈ ಕಾರಣಕ್ಕಾಗಿ ವಸಾಹತು ಹಾಗೂ ನವ ವಸಾಹತು ಚಿಂತನೆಗಳನ್ನು ಅವರು ಅರಗಿಸಿಕೊಳ್ಳುವ ಹಾಗೂ ಅಭಿವ್ಯಕ್ತಿಸುವ ರೀತಿಯೇ ವಿಶಿಷ್ಟವಾದುದಾಗಿದೆ.

ಕವಿಯು ಮುಂದೆ ಬರೆದಂತಹ ಕಪ್ಪು ಕಾಡಿನ ಹಾಡು ಕವನಸಂಕಲನದ ಕವನದಲ್ಲಿ ಹೊಸ-ಹೊಸ ಚಿಂತನೆಗಳನ್ನು ಕಟ್ಟಿಕೊಡುತ್ತಾರೆ.

ಇದೇ ರೀತಿಯಾಗಿ ಬಾಲ್ಯದಲ್ಲಿ ಸ್ವತಃ ಅನುಭವಿಸಿದ ಯಾತನೆ, ನೋವು, ಮತ್ತು ಪರಿಸರದಲ್ಲಿ ಕಂಡುಂಡ ಅನುಭವಗಳನ್ನೇ ಬಹುಪಾಲು ಕವಿತೆಗಳಾಗಿ ಮೂಡಿಸಿದವರು ಅರವಿಂದ ಮಾಲಗತ್ತಿಯವರು, ಅವರ ಒಂದು ಕವನವನ್ನು ಗಮನಿಸೋಣ.

*"ಎದಿಯನ ಮಾತು ಎದಿಯಾಗಿಟ*

*ಮುಳ್ಳ ಬೇಲಿಯಂಗ ಬಣಗುದಟ*

*ಕಾಸಿ ಬಡ್ಡ ಹಲಗಿಯಂಗ*

*ಎದಿಯ ಬಿಚ್ಚಿ ಹಾಡುನ ಬಾರ್ಯ"*[11]

ಕವಿ ಕಾವ್ಯ ರಚನೆಯನ್ನು ಎಷ್ಟೊಂದು ಗಂಭೀರವಾಗಿ ಪರಿಗಣಿಸುತ್ತಾರೆಂದರೆ ಕಾವ್ಯ ಜೀವನಾನುಭವದ ಪ್ರಾಮಾಣಿಕ ಅಭಿವ್ಯಕ್ತಿಯಾಗಿರಬೇಕೆಂದು ಬಯಸುತ್ತಾರೆ.

ಭಾಷೆಯನ್ನು ಬಂಡವಾಳ ಮಾಡಿಕೊಂಡು ದಲಿತರ ಮೇಲೆ ಕಥೆ ಕವನ ಬರೆದು ಉಪಾಯದ ಹಾದಿಯತ್ತ ಸಾಗಿದ್ದಾರೆ.

ಬದುಕಿನಲ್ಲಿ ಪ್ರಾಮಾಣಿಕತೆ ಕಾಣೆಯಾಗಿರುವುದಕ್ಕೆ ವ್ಯಾಕುಲಗೊಂಡಿರುವ ಕವಿ 'ಕಾಸಿ ಬಡ್ಡ ಹಲಗೆಯಂತೆ ಎದೆಯ ಬಿಚ್ಚಿ ಹಾಡು ನಾ' ಎಂದಿರುವುದು ಮಹತ್ವವಾಗಿದೆ. ನಿಗೂಢತೆ ಇರುವಲ್ಲಿ ಶೋಷಣೆ ಇದ್ದೇ ಇರುತ್ತದೆ. ಎಂಬ ಗ್ರಹಿಕೆಯಲ್ಲಿ ಬದುಕು ಉತ್ತಮಗೊಳ್ಳಲು ಸಾಹಿತ್ಯವೂ ಅಂತಃಕರಣದ ಪ್ರಾಮಾಣ ಬದ್ಧವಾಗಿರಬೇಕೆಂಬ ಆಶಯ ಇಲ್ಲಿ ವ್ಯಕ್ತವಾಗಿದೆ.

ಹೀಗೆ ಅನೇಕ ದಲಿತ ಕವಿಗಳು ಆಕ್ರೋಶವನ್ನು ಭಾಷೆಯ ಮೂಲಕ ಕವನಗಳನ್ನು ಕಟ್ಟಿ ಸಮಾಜದ ಶೋಷಣೆಗಳಲ್ಲಿ ಬಳಸಿಕೊಂಡಿದ್ದಾರೆ ಎಂದರೆ ತಪ್ಪಾಗಲಾರದು.

'ಹೊಲೆಮಾದಿಗರ ಕವನ' ಸಂಕಲದಲ್ಲಿ ಮೂಡಿ ಬಂದಿರುವ ಕವನಗಳು ಸರಳ ಭಾಷೆಯಿಂದ ಆವೇಶವನ್ನು ಕಲುಕಿ ಎಚ್ಚರಗೊಳಿಸುವಂತಹ ಭಾಷೆಯನ್ನು ಬಳಸಿಕೊಂಡಿದ್ದಾರೆ.

"ಸಾವಿರಾರು ನದಿಗಳು" ಕವನ ಸಂಕಲನದಲ್ಲಿ ಅಭಿವ್ಯಕ್ತಿ ಮತ್ತು ತಾತ್ವಿಕತೆಯ ನಡುವೆ ಸೃಜನಾತ್ಮಕ ಸಾಮರಸ್ಯ ಸಾಧಿಸಿದ ಕೆಲವು ಅಪೂರ್ವ ಮತ್ತು ಮಹತ್ವದ ರಚನೆಗಳಿವೆ. ಇದಕ್ಕೆ ಉಜ್ವಲವಾದ ಉದಾಹರಣೆಗಳು 'ಸಾವಿರಾರು ನದಿಗಳು' ಎಂಬ ಕವನವೇ ಆಗಿದೆ.

ಸಿದ್ಧಲಿಂಗಯ್ಯನವರ ಭಾಷೆಯಂತೆ ದೇವನೂರು ಮಾಹಾದೇವ ಅರವಿಂದ ಮಾಲಗತ್ತಿಯವರು ಬರೆಯುತ್ತಾರೆ. ಅರವಿಂದ ಮಾಲಗತ್ತಿಯವರ ಒಂದು ಕವನವನ್ನು ಗಮನಿಸೋಣ.

*"ಹುಟ್ಟಬಾರದ್ರೆಪ್ಪೋ ಹುಟ್ಟ ಬಾರ್ದ*
*ಏಳೇಲ ಜಲ್ಮದಾಗ ಈ ಭೂಮಿ ಮ್ಯಾಗ*
*ಹೊಲಿ ಮಾದಿಗ್ರಾಗಿ ಹುಟ್ಟಬಾರ್ದ"*[೧೨]

ಅರವಿಂದ ಮಾಲಗತ್ತಿಯವರ್"ಮೂಕನಿಗೆ ಬಾಯಿ ಬಂದಾಗ" (೧೯೮೧) ದ ಕವನಗಳು ದಲಿತಾನುಭವದ ಸತ್ಯಶಾಲೀ ರಚನೆಗಳಾಗಿವೆ. ದಲಿತರ ಭಾಷೆಯನ್ನು ಸೊರೆಗೊಂಡ ಕೆಲವೆ ಕವಿಗಳಲ್ಲಿ ಇವರು ಮುಖ್ಯರು.

ಈ ಮೇಲಿನ ಕವನದ ರೂಪ ಗದ್ಯದಲ್ಲಿಯೇ ಘೋಷಿಸುವ ಈ ಕವಿ ಮುಂದೆ ಧ್ವನಿ ಪೂರ್ಣವಾದ ಸಾಲುಗಳನ್ನು ರಚಿಸಿದರು.

ಆಕ್ರೋಶದ ರಭಸದಲ್ಲಿ ಸೂಕ್ಷ್ಮತೆಯನ್ನು, ವೈಚಾರಿಕತೆಯ ಒತ್ತಡದಲ್ಲಿ ಕಲಾತ್ಮಕತೆಯನ್ನು ಅರವಿಂದರು ಕಳೆದುಕೊಂಡಿಲ್ಲ. ಇವರ ಕವನಗಳಲ್ಲಿ ರೋಷಕ್ಕಿಂತ ಮಿಗಿಲಾಗಿ ವಿಷಾದ ಮಡುಗಟ್ಟಿದೆ, ಎಂದು ಹೇಳಬಹುದು.

ದಲಿತ ಸಾಹಿತ್ಯದಲ್ಲಿ ಬರುವ ಎಲ್ಲಾ ಬರಹಗಾರ ಬರಹವು ಹೆಚ್ಚು ಕಡಿಮೆ ಒಂದೇ ರೀತಿಯಾಗಿದೆ. ಸಮಾಜದಲ್ಲಿ ದಲಿತರ ಬಗ್ಗೆ ನಡೆಯುವ ಘರ್ಷಣೆಯನ್ನು ತಮ್ಮದೆ ಆದ ಭಾಷೆಯನ್ನು ಬಳಸಿ ಸಮಾಜದ ಜನತೆಗೆ ಎಚ್ಚರವನ್ನು ಕೊಡುವಂತೆ ಧ್ವನಿಯನ್ನು ಕವನಗಳಾಗಿ ಮೂಡಿಸಿದ್ದಾರೆ.

"ಸಾವಿರಾರು ನದಿಗಳು" ಕವನ ಸಂಕಲನದಲ್ಲಿ ಈಗಾಗಲೇ ಮೇಲೆ ವಿವರಿಸಿದ ಕವನಗಳಿಂದು ಭಾಷೆಯ ವೈಶಿಷ್ಟ್ಯತೆ ಹೇಗೆ ಮೂಡಿ ಬಂದಿದೆ ಎಂಬುವುದನ್ನು ಹಲವಾರು ಕವನಗಳಿಂದ ಸ್ಪಷ್ಟಪಡಿಸಿದೆ. 'ಸಾವಿರಾರು ನದಿಗಳು' ಕವನ ಸಂಕಲನದಲ್ಲಿನ ಕವಿಯ ಭಾಷಾ ಜೊತೆಗೆ ಭಾವನೆಗಳು ಕೂಡ ಆಳವಾಗಿ ಹರಿತವಾಗಿ ಹರಿಯತೊಡಗಿದೆ.

ಕವಿಯೆ ಕೊಟ್ಟಿರುವ ಶೀರ್ಷಿಕೆಗೆ ತಕ್ಕಂತೆ ಕವಿಯೆ ಅನುಭವಿಸಿದ ನೋವು, ಜನತೆಗೆ ಕೊಡುವ ಘೋರ ಹಿಂಸೆ, ಎಲ್ಲೆಂದರೆ ಅಲ್ಲಿ ಅವಮಾನ ಇವುಗಳೆಲ್ಲವನ್ನು ಕೂಡ ಕವಿ ಸಾವಿರಾರು ರೀತಿಯಲ್ಲಿ ಕವನಗಳನ್ನು ಮೂಡಿಸಿ ಸಮಾಜದ ಜನತೆಗೆ ಹಲವು ರೀತಿಯ ಎಚ್ಚರಿಕೆಯನ್ನು ಕೊಟ್ಟಿದ್ದಾರೆ ಎಂದರೆ ತಪ್ಪಾಗಲಾರದು.

'ಸಾವಿರಾರು ನದಿಗಳು' ಕವನ ಸಂಕಲನದಲ್ಲಿ ಮೂಡಿ ಬಂದಿರುವ 'ಸಾವಿರಾರು ನದಿಗಳು', ಬೆಲ್ಜಿಯ ಹಾಡು, ದಲಿತರು ಬರುವರು, ಚೋಮನ ಮಕ್ಕಳು, ಮೆರವಣಿಗೆ, ಇವೆಲ್ಲವು ಕೂಡ ತನ್ನದೆ ಆದ ಪರಿಮಿತಿಯೊಳಗೆ ಭಾಷಾ ಅವರಣವನ್ನು ಕಟ್ಟಿಕೊಂಡಿದೆ.

'ಅಲ್ಲೆ ಕುಂತವರೆ' ಕವನವಂತು, ಒಂದು ಖಂಡಕಾವ್ಯದ ರೀತಿಯಲ್ಲಿದ್ದರೂ ಕವಿ ಪದ ಮತ್ತು ಮಾತು ಎಂಬ ಸಂಕೇತಗಳನ್ನಿಟ್ಟುಕೊಂದು ಶೋಷಣೆ ಮತ್ತು ಬಡತನವನ್ನು ತನ್ನ ಕಾವ್ಯದ ವಸ್ತುವಾಗಿಟ್ಟುಕೊಂಡು ಹಲವು ಸಾಹಿತಿಗಳಲ್ಲಿ ತಾನೊಬ್ಬ ಸಾಹಿತಿ ಎಂಬುವುದನ್ನು ಸಾಬೀತು ಪಡಿಸಿಕೊಂಡರು.

*"ಅಲ್ಲೀ ಕುಂತವರು ಕವನದ ಭಾಷಾ ವೈಕರಿ ಎಂದರೆ*

*ಗ್ವಾಮಾಳೆ ಹಿಂಡುತ್ತಾರೆ*

*ತಲೆಬುಳ್ಡೆ ಜಜ್ಜುತ್ತಾರೆ*

*ಮಾತಿಲ್ಲದ ಗಂಟಲಿಗೆ*

*ವಲೆದು ಕೊಂಡ ತುಟಿಗಳಿಗೆ*

*ಆದುಮಿ ಆದುಮಿ ತುರುಕುತ್ತಾರೆ*

*ಅನ್ನದ ಮಿಡಿಕೆ"*[೧೩]

ಈ ರೀತಿಯಾದ ಭಾಷಾ ವೈಖರಿಯನ್ನು ಕವಿ ತನ್ನ ಕವನಗಳಲ್ಲಿ ಅದ್ಭುತವಾಗಿ ಓದುಗರಿಗೆ ಅರ್ಪಿಸಿದ್ದಾರೆ.

## ಅಡಿ ಟಿಪ್ಪಣಿ

೧. ಮೆರವಣಿಗೆ, ಡಾ॥ಸಿದ್ಧಲಿಂಗಯ್ಯ, ಅಂಕಿತಪುಸ್ತಕ, ಬೆಂಗಳೂರು, ೨೦೦೦, ಪು.ಸಂ:೮೫

೨. ಮೆರವಣಿಗೆ, ಡಾ॥ಸಿದ್ಧಲಿಂಗಯ್ಯ, ಅಂಕಿತಪುಸ್ತಕ, ಬೆಂಗಳೂರು, ೨೦೦೦, ಪು.ಸಂ:೮೭

೩. ಮೆರವಣಿಗೆ, ಡಾ॥ಸಿದ್ಧಲಿಂಗಯ್ಯ, ಅಂಕಿತಪುಸ್ತಕ, ಬೆಂಗಳೂರು, ೨೦೦೦, ಪು.ಸಂ:೮೮

೪. ಮೆರವಣಿಗೆ, ಡಾ॥ಸಿದ್ಧಲಿಂಗಯ್ಯ, ಅಂಕಿತಪುಸ್ತಕ, ಬೆಂಗಳೂರು, ೨೦೦೦, ಪು.ಸಂ:೮೯

೫. ಮೆರವಣಿಗೆ, ಡಾ॥ಸಿದ್ಧಲಿಂಗಯ್ಯ, ಅಂಕಿತಪುಸ್ತಕ, ಬೆಂಗಳೂರು, ೨೦೦೦, ಪು.ಸಂ:೯೧

೬. ಮೆರವಣಿಗೆ, ಡಾ॥ಸಿದ್ಧಲಿಂಗಯ್ಯ, ಅಂಕಿತಪುಸ್ತಕ, ಬೆಂಗಳೂರು, ೨೦೦೦, ಪು.ಸಂ:೯೧

೭. ಮೆರವಣಿಗೆ, ಡಾ॥ಸಿದ್ಧಲಿಂಗಯ್ಯ, ಅಂಕಿತಪುಸ್ತಕ, ಬೆಂಗಳೂರು, ೨೦೦೦, ಪು.ಸಂ:೯೪

೮. ಮೆರವಣಿಗೆ, ಡಾ॥ಸಿದ್ಧಲಿಂಗಯ್ಯ, ಅಂಕಿತಪುಸ್ತಕ, ಬೆಂಗಳೂರು, ೨೦೦೦, ಪು.ಸಂ:೧೦೧

೯. ಮೆರವಣಿಗೆ, ಡಾ॥ಸಿದ್ಧಲಿಂಗಯ್ಯ, ಅಂಕಿತಪುಸ್ತಕ, ಬೆಂಗಳೂರು, ೨೦೦೦, ಪು.ಸಂ:೧೦೬

೧೦. ಮೆರವಣಿಗೆ, ಡಾ॥ಸಿದ್ಧಲಿಂಗಯ್ಯ, ಅಂಕಿತಪುಸ್ತಕ, ಬೆಂಗಳೂರು, ೨೦೦೦, ಪು.ಸಂ:೧೦೭

೧೧. ಮೆರವಣಿಗೆ, ಡಾ॥ಸಿದ್ಧಲಿಂಗಯ್ಯ, ಅಂಕಿತಪುಸ್ತಕ, ಬೆಂಗಳೂರು, ೨೦೦೦, ಪು.ಸಂ:೮೫

೧೨. ಮೆರವಣಿಗೆ, ಡಾ॥ಸಿದ್ಧಲಿಂಗಯ್ಯ, ಅಂಕಿತಪುಸ್ತಕ, ಬೆಂಗಳೂರು, ೨೦೦೦, ಪು.ಸಂ:೩೬

೧೩. ಮೆರವಣಿಗೆ, ಡಾ॥ಸಿದ್ಧಲಿಂಗಯ್ಯ, ಅಂಕಿತಪುಸ್ತಕ, ಬೆಂಗಳೂರು, ೨೦೦೦, ಪು.ಸಂ:೧೦೬

# ಅಧ್ಯಾಯ – ೪

## ಕಪ್ಪುಕಾಡಿನಹಾಡು : ಶಿಷ್ಟ ಭಾಷಾ ಬಳಕೆಯ ಹೆಚ್ಚಳ–೧೯೮೩

ಕವಿತೆಯ ಮೂರನೆಯ ಕವನಸಂಕಲನ ಕಪ್ಪುಕಾಡಿನ ಹಾಡ ಕವಿ ಮೊದಮೊದಲಿಗೆ ಶಿಷ್ಟ ಭಾಷೆಯ ಬಳಕೆಯನ್ನು ಬಳಸಿದರು ತದ ನಂತರ ಕ್ಲಿಷ್ಟ ಭಾಷೆಯನ್ನು ಬಳಸಿಕೊಂಡಿದ್ದಾರೆ. ಹೊಲೆಮಾದಿಗರ ಹಾಡು ಕವನದಲ್ಲಿ ಭಾಷೆಯ ಸೊಗಡಿಗೂ ಕಪ್ಪು ಕಾಡಿನ ಹಾಡು ಕವನಗಳಿಗೂ ಹೋಲಿಕೆ ಮಾಡಿಕೊಂಡಿದ್ದಾರೆ,

ಹೋಲೆಮಾದಿಗರ ಹಾಡುವಿನಲ್ಲಿ ಒಂದು ಕವನವನ್ನು ಗಮನಿಸಿದಾಗ ಗ್ರಾಮ್ಯ ಭಾಷೆಯ ಬಳಕೆಯನ್ನು ಕಾಣಬಹುದು. ಇಕ್ರಲಾ, ವದೀರ್ಲಾ, ಈ ನನ್ನ ಮಕ್ಕಳ ಚರ್ಮ ಎಬ್ರಲಾ ಎಂಬ ಕವನಕ್ಕು ಕಪ್ಪು ಕಾಡಿನ ಹಾಡಿನಲ್ಲಿ ಬರುವ ಭಾಷೆಯನ್ನು ಗಮನಿಸಿದರೆ ಶಿಷ್ಟತೆಯ ಜೊತೆ ಪದಗಳ ಬಳಕೆ ಮತ್ತು ವಾಕ್ಯರಚನೆ ಪ್ರಾಸ ಮತ್ತು ಸರಳ ಭಾಷೆ ಹಾಗೂ ನವೋಧಯತೆಯನ್ನು ಕಾಣಬಹುದಾಗಿದೆ.

ಉದಾ: “ಗುಡಿಸಲಿನಲ್ಲಿ ಅರಳುವ ಗುಲಾಬಿ
ನಕ್ಷತ್ರ ನನ್ನಕವನ
ಕತ್ತಲೆಯಲ್ಲಿ ಕಾಣುವ ಬೆಳಕು
ಬಂಡಾಯದ ಈ ಕವನ
ಬದುಕು ಪ್ರೀತಿಸುವ ಬಡವರ ಮಗಳು
ನಿರಾಭರಣೆ ಕವನ
ಜನಗಳು ತಿನ್ನುವ ಅನ್ನದ ಅಗುಳು
ಜೀವನ ನನ್ನ ಕವನ
ಚಿಮ್ಮಿ ಹರಿಯುವ ರಕ್ತದ ಕೋಡಿ
ಕೆಂಪು ಕಡಲು ಕವನ
ಹೆಣ್ಣು ತುಳುಕಿಸಿದ ಕಣ್ಣೀರಿನ ಹನೆ

ನನ್ನ ಪುಟ್ಟ ಕವನ."[7]

ಕವಿಯ ಮನಸ್ಸು ಬದಲಾದಂತೆ ಬರವಣಿಗೆಯು ಕೂಡ ಬದಲಾಗತೊಡಗಿದೆ. ಹೊಲೆಮಾದಿಗರ ಹಾಡು ಕವನ ಸಂಕಲನದಲ್ಲಿನ ಭಾಷಾ ಶೈಲಿಗಿಂತ ಕಪ್ಪು ಕಾಡಿನ ಹಾಡು ಕವನಗಳಲ್ಲಿ ಭಾಷಾ ಶೈಲಿ ಭಿನ್ನವಾಗಿದೆ. ಸಹೃದಯರನ್ನು ಬಹುಬೇಗ ಸ್ಪರ್ಶಿಸುವಂತಿದೆ.

ಪದ ಬಳಕೆಯ ರೀತಿ

ಗುಡಿಸಲಿನಲ್ಲಿ –ಸ್ಥಳದ ಹೆಸರು (ವಸತಿ)

ಅರಳುವ – ಬೆಳಕು ಕೊಡುವ

ಗುಲಾಬಿ – ಸುಂದರವಾದ

ಹೀಗೆ ಕವನದಲ್ಲಿ ಬರುವ ಪ್ರತಿಯೊಂದು ಪದಕ್ಕೂ ಅರ್ಥವನ್ನು ಕಲ್ಪಿಸುವಂತೆ ಪದಗಳ ನಾಜೂಕನ್ನು ಮತ್ತು ಶಿಷ್ಟತೆಯನ್ನು ಬಳಸಿದ್ದಾರೆ.

ಹಾಗೆ ವಾಕ್ಯರಚನೆ

'ಬದುಕು ಪ್ರೀತಿಸುವ ಬಡವರ ಮಗಳು ನಿರಾಭರಣೆ ಕವನ:

ಕವನದ ಮೊದಲಿನಿಂದ ಹಿಡಿದು ಕವನದ ಕೊನೆಯತನಕವು ಪ್ರತಿ ಎರಡು ಸಾಲುಗಳಿಗೆ ಒಂದು ವಾಕ್ಯವು ಪೂರ್ಣಗೊಳ್ಳುತ್ತದೆ.

ಕವನವು ಕೊನೆಗೊಳ್ಳುವತನಕ ಒಂದೊಂದು ಪದವು ಕೂಡ ನಾನಾ ಅರ್ಥಗಳಿಂದ ಕೂಡಿದ್ದು ಪದಗಳಿಂದಲೇ ಕವನವನ್ನು ಕಟ್ಟುತ್ತಾರೆ. ಅದರ ಜೊತೆಗೆ ಲಯಗಾರಿಕೆ ಎಂಬುವುದಿದೆ.

ಲಯ

*"ಜನಗಳು – ತಿನ್ನುವ – ಅನ್ನದ – ಅಗಳು*

*ಜೀವ – ನನ್ನ – ಕವನ್*

*ಲಯವನ್ನು ಈ ಕವನದಲ್ಲಿ ಕಾಣಬಹುದು.*

ಒಂದು ಕವನದಿಂದ ಮತ್ತೊಂದು ಕವನಕೆ ಪದ ಬಳಕೆಯ ಶೈಲಿಯೇ ಬದಲಾಗತೊಡಗಿದೆ.

*ರಾಜ್ಯವಾಳುವ ಯೋಗ ನಿನಗುಂಟು ಕೆಂಪಣ್ಣ*

*ಎದ್ದು ನಿಲ್ಲೋ ರಾಜ ಕಟ್ಟಯ್ಯ ದಂಡು*

*ನೀನರಸನಾದಾಗ ನನ್ನ ಮಂತ್ರಿಯ ಮಾಡೂ*

*ಮುತ್ತಿಗೆಯ ಹಾಕಯ್ಯ ಕೊಳ್ಳಯ್ಯ ಕತ್ತಿ''*[೨]

ಕಪ್ಪು ಕಾಡಿನ ಹಾಡು ಕವನದ ಮೊದಲ ಪದ್ಯ ಪದಗಳಿಂದ ಕೂಡಿದ ಕವನ ವಾದರೆ ಇದು ಗದ್ಯದಿಂದ ಕೂಡಿದ ರೂಪದಲ್ಲಿ ಬರೆದಿರುವ ಕವನವಾಗಿದೆ. ಸಾಲುಗಳಿಂದ ತುಂಬಿರುವ ಕವನವಾದರೂ ಕವನದ ಅರ್ಥ ಕೊನೆಗೊಳ್ಳುವಾಗ ಮಾತ್ರ ಸಂಪೂರ್ಣವಾಗಿ ಕೊನೆಗೊಳ್ಳುತ್ತದೆ. ಮೇಲೆ ಕಾಣಿಸಿಕೊಳ್ಳುವ ಕವನದಲ್ಲಿ ಲಯಗಾರಿಯಿಲ್ಲ ಅದರ ಬದಲಾಗಿ ಗದ್ಯದ ರೂಪದಲ್ಲಿದೆ.

ಮೇಲಿನ ಕವನವು "ಅವನ ಕೈಗೆ ಕತ್ತಿಯನ್ನು ಕೊಟ್ಟು ರಾಜ್ಯ ಕಟ್ಟಲು ಹೊರಡಿಸುತ್ತಾನೆ. ಇಂತಹ ಕೆಂಪೇಗೌಡನೆಂಬ ಜೀತಗಾರನಿಗೆ ನೆರವಾಗಲು ಅನೇಕ ಜೀತಗಾರರು ತಮ್ಮ ಪ್ರಾಣವನ್ನು ಅರ್ಪಿಸಿಕೊಂಡಿದ್ದಾರೆ. ಇವನ ರಾಜ್ಯ ಬೆಳೆಸಲು ಎಷ್ಟು ಜನರ ಕಗ್ಗೊಲೆಯಾಯಿತೋ ಗೊತ್ತಿಲ್ಲ. ಇಂತಹ ಜೀತಗಾರರ ನೋವಿಗೆ ನಲುಗಿದ ಕವಿ ಇಡೀ ವ್ಯವಸ್ಥೆಯೇ ತಲ್ಲಣಗೊಳಿಸುವಂತೆ ತಮ್ಮ ವಿದಂಬನೆಯ ಮೂಲಕ ದಲಿತರ ನೋವನ್ನ ಕಾಣದೆ ಬೆಂಗಳೂರು ಶ್ರೀಮಂತ ನಗರ, ಸುಂದರವಾದ ನಗರ ಎಂದು ಹೊಗಳುವ ಹೊಗಳು ಭಟ್ಟರನ್ನು ಕುರಿತು ಗದ್ಯದ ರೂಪದಲ್ಲಿ ಭಾಷೆ ಶೈಲಿಯನ್ನು ಬಳಸಿಕೊಂಡಿದ್ದಾರೆ.

ಇಂದು ಬೆಂಗಳೂರು ಉಳ್ಳವರ ಪಾಲಾಗಿ 'ಹೈಟೆಕ್ ಸಿಟಿ' ಎನಿಸಿಕೊಂಡು, ಜೋಪಡಿಯ ಕೆಳಗೆ ಮಲಗುವವರಿಗೆ ಶೋಷಣೆಯ ಮೂಲವಾಗಿರುವ ಇದು ಒಂದು ರೀತಿಯಲ್ಲಿ ಮುಖವಾಡ ಧರಿಸಿದ ಮಾಯಾನಗರಿಯೇ ಸರಿ ಎಂದು ಹೇಳುತ್ತಾ ಕವಿ ವಿಡಂಬನೆಯ ಮೂಲಕ ತೋರ್ಪಡಿಸಿರುವ ರೀತಿ ಕವಿಯ ಸಮಕಾಲೀನ ಪ್ರಜ್ಞೆಗೆ ಸಾಕ್ಷಿಯನ್ನೊದಗಿಸುತ್ತದೆ.

"ಆ ಬೆಟ್ಟದಲ್ಲಿ ಬೆಳದಿಂಗಳಲ್ಲಿ

ಸುಳಿದಾಡಬೇಡ ಗೆಳತಿ

ಚಲುವಾದ ನಿನ್ನ ಮಲ್ಲಿಗೆಯ ಮೆಯ್ಯ

ಸುಟ್ಟಾವು ಬೆಳ್ಳಿ ಕಿರಣ

ಇಳಿಜಾರಿನಲ್ಲಿ ಆ ಕಣಿವೆಯಲ್ಲಿ

ನೀ ಇಳಿಯಬೇಡ ಗೆಳತಿ

ತತ್ತರಿಸುವಂತೆ ಕಾಲಲ್ಲಿ ಕಮಲ

ಮುತ್ತುವವು ಮೊಲದ ಹಿಂದು"[1]

ಇಲ್ಲಿ ಪದಗಳ ಲಯಗಾರಿಕೆಯನ್ನು ಗಮನಿಸಬಹುದು. ಆ ಬೆಟ್ಟದಲ್ಲಿ ಎಂಬ ಪದಕ್ಕೆ ಒಂದು ಲಯ ಬೆಳದಿಂಗಳಲ್ಲಿ ಅಲ್ಲಿ ಒಂದು ಲಯ ಕವನದ ಕೊನೆಯವರೆಗೂ ಪ್ರತಿಯೊಂದು ಪದ–ಪದಕ್ಕೂ ಲಯವನ್ನು ಕಾಣಬಹುದು.

ಈ ಕವನದಲ್ಲಿ ನವೋದಯತೆಯನ್ನು ಗುರ್ತಿಸಬಹುದು. ಕೆ.ಎಸ್.ನರಸಿಂಹಸ್ವಾಮಿಯವರ ಕವನಗಳನ್ನು ಹೋಲಿಕೆಮಾಡಿದಾಗ ನವೋತ್ತರವನ್ನು ಕಾಣಬಹುದು (ಮೈಸೂರು ಮಲ್ಲಿಗೆ)

ಪದ + ಪ್ರತ್ಯಯಗಳನ್ನು ಕವನದುದಕ್ಕೂ ಗುರ್ತಿಸಬಹುದು.

ಬೆಟ್ಟ+ಅಲ್ಲಿ = ಬೆಟ್ಟದಲ್ಲಿ

ಇಲ್ಲಿ ಬೆಟ್ಟ ಎಂಬುವುದು ನಾಮ ಪದವಾದರೆ ಅಲ್ಲಿ ಎಂಬುವುದು ಪ್ರತ್ಯಯವಾಗುತ್ತದೆ. ವಿಗ್ರಹವಾಕ್ಯವನ್ನು ಕೊಡಿಸಿ ಬರೆದಾಗ ಅದೊಂದು ಸಂಧಿಯಾಗುತ್ತದೆ. ಆಗಮ ಸಂಧಿ

ನದಿಯಲ್ಲಿ

ಬೆಟ್ಟದಲ್ಲಿ

ಆಡು ಭಾಷೆಯನ್ನು ತನ್ನ ಕಾವ್ಯಗಳಲ್ಲಿ ಬಳಸುತ್ತಿದ್ದ ಕವಿ ಮುಂದೆ ಮುಂದೆ ಸಾಗುತ್ತಿದಂತೆ ಕವನಗಳ ಭಾಷಾ ಶೈಲಿಯನ್ನು ನಾಗರೀಕತೆಯೆಡೆಗೆ ಕೊಂಡೋಯುತ್ತಿದ್ದಾರೆ.

ಹೊಲೆಮಾದಿಗರ ಹಾಡು ಕವನಗಳ ನಂತರ ಬರೆದ್ದಂತಹ ಕವನಗಳಲ್ಲಿ ಲಯಗಾರಿಕೆ ಮತ್ತು ಛಂದೋಗತಿಯಲ್ಲಿ ಕವಿಗೆ ಇನ್ನಷ್ಟು ಪರಿಣಿತಿ, ಸ್ವಂತಿಕೆ" ಮುಂದಿನ ಸಂಕಲನದ ಹೊತ್ತಿಗೆ ಬಂತು

ಆ ಬೆಟ್ಟದಲ್ಲಿ ಬೆಳದಿಂಗಳಲಿ ಕವನದಲ್ಲಿ ಮೊದಲಿನಿಂದ ಹಿಡಿದು ಕೊನೆಯವರೆಗೂ ಕೂಡ ಲಯಗಾರಿಕೆಯನ್ನು ನಾವು ಗಮನಿಸಬಹುದು.

ಲಯಕ್ಕೆ ಉದಾಹರಣೆ:

ಆ – ಬೆಟ್ಟದಲ್ಲಿ – ಬೆಳದಿಂಗಳಲ್ಲಿ

ಸುಳಿದಾಡಬೇಡ – ಗೆಳತಿ

ಚೆಲುವಾದ – ನಿನ್ನ – ಮಲ್ಲಿಗೆಯ – ಮಯ್ಯ

ಸುಟ್ಟಾವು – ಬೆಳ್ಳಿ – ಕಿರಣ

ಹೀಗೆ ಕವಿಯ ಕವನಗಳ ಸ್ವಚಂದ ಲಯಗಾರಿಕೆ ಮೂಡಿಸಿರುವುದನ್ನು ಕಾಣಬಹುದು.

*"ರಾಣಿಯ ಪ್ರೇಮ*

*ಆಳು ಕೊಕ್ಕರೆಯೊಂದು ಮೀನು ಪ್ರೀತಿತು*

*ಈ ಪ್ರೇಮದ ಗುಟ್ಟೇನು*

*"ಮಸೆದ ಕತ್ತಿಯ" "ಕೊರಳ ಪ್ರೀತಿಸಿತು"*

*ಈ ಒಲವಿನ ಪರಿಯೇನು?*

*ರಾಗಿ " ಮನದಾಳದ ನೋವೇರುತಲಿರುವುದು*

*ತಲೆಯ ತಿಕ್ಕು ಬಾರೋ*

*ಕಣ್ಣ ಕೊಳದಲ್ಲಿ ಬಿಂಬವ ನೋಡುವೆನು*

*ಎದೆಯ ಹೊಕ್ಕು ಬಾರೋ"[9]*

ಕಪ್ಪುಕಾಡಿನ ಹಾಡು ಕವನಗಳಲ್ಲಿ ಹೃದಯವನ್ನು ಕಲಕುವಂತ ಕವನ ಇದಾಗಿದೆ. ಜಾತಿ–ಜಾತಿಗಳ ಮಧ್ಯ ಮತ್ತು ಮೇಲ್ವರ್ಗ ಹಾಗೂ ಕೆಳವರ್ಗಗಳ ಅಂತರವನ್ನು ಎರಡು

ದೃಷ್ಟಾಂತಗಳನ್ನು ತೆಗೆದುಕೊಂಡು. ಒಗಟಿನ ಮೂಲಕ ಭಾಷಾ ಪರಿಯನ್ನು ತನ್ನ ಮಾತುಗಳಿಗೆ ಬಳಸಿಕೊಂಡಿರುವುದು ಬಹಳ ಸೊಗಸಾಗಿದೆ.

ಈ ಕವನವನ್ನು ಗಮನಿಸಿದರೆ "ಜನ್ನನ ಯಶೋಧರ ಚರಿತೆ" ನೆನಪಿಗೆ ಬರುತ್ತದೆ.

ಸುಖದ ಸುಪತ್ತಿಗೆಯಲ್ಲಿ ತೇಲಾಡುವ ರಾಣಿ ಅಷ್ಟವಂಕನನ್ನು ಇಷ್ಟಪಡುವುದು ಈ ವಿಷಯ ರಾಜನಿಗೆ ತಿಳಿದು ತನ್ನ ಧರ್ಮದ ಶ್ರೇಷ್ಠತೆಯನ್ನು ಉಳಿಸಿಕೊಳ್ಳಲು ರಾಣಿಯನ್ನು ಕೊಲ್ಲದೆ ಹಿಟ್ಟಿನ ಹುಂಜವನ್ನು ಬಲಿಕೊಡುವುದು ತನ್ನ ತಾಯಿ ಅದಕ್ಕೆ ಮರುಗುವುದು.

ಹೀಗೆ ಜನ್ನನ ಯಶೋಧರ ಚರಿತೆಯಲ್ಲಿ ಕಂಡುಬಂದರೆ ಈ ಕವನದಲ್ಲಿ ಕೊಕ್ಕರೆ ಮತ್ತು ಮೀನುಗಳನ್ನು ಬಳಸಿದ್ದಾರೆ. ಕೊಕ್ಕರೆ ಎಂಬುವುದು ಬಲಿಷ್ಠತೆಯನ್ನು ತಿಳಿಸುತ್ತದೆ ಹಾಗೆ ಮೀನು ಎಂಬುವುದು ಕೆಳಮಟ್ಟವನ್ನು ಗುರ್ತಿಸುತ್ತದೆ. ರಾಣಿ ಮತ್ತು ಆಳುವಿನ ಸಂಭಾಷಣೆಯನ್ನು ಪಕ್ಷಿಗಳ ಬಾಯಿಯಲ್ಲಿ ಮಾತನಾಡಿಸಿರುವುದು ನಿಜಕ್ಕೂ ಭಾಷೆಯ ವೈಶಿಷ್ಟ್ಯ ಪೂರ್ಣವಾಗಿದೆ ಎಂಬುವುದು ಒಂದು ಅರ್ಥವನ್ನು ಕೊಟ್ಟರೆ ಮತ್ತೊಂದು ಅರ್ಥ "ದೊರೆ ಮಾಡಿದರೆ ದಂಡವಿಲ್ಲ, ಗುಲಾಮ ಮಾಡಿದರೆ ದಂಡ," ಎಂಬಂತೆ ಅರ್ಥವನ್ನು ಪಡೆದುಕೊಳ್ಳುತ್ತದೆ.

ಸಮಾಜದ ಮತ್ತು ಸಂಪ್ರದಾಯದ ಹಾದಿಯನ್ನು ಮೀರಿದ ರಾಣಿಯೆ ಸ್ವಾರ್ಥಕ್ಕೆ ಇಲ್ಲಿ ಆಳು ಪ್ರಾಣವನ್ನು ಕಳೆದುಕೊಳ್ಳಬೇಕಾಗುತ್ತದೆ. ಆದುದರಿಂದ ಸಮಾಜದ ಪರಿಸ್ಥಿತಿಯನ್ನು ಸಂಪೂರ್ಣವಾಗಿ ಚಿತ್ರಿಸುವಂತಹ ಸರಳ ಭಾಷೆಯಲ್ಲಿ ಈ ಕವನವನ್ನು ಮೂಡಿಸಿದ್ದಾರೆ.

*"ತುಂಬಿ ಹರಿಯುವ ನದಿಯ ತುಂಬ*
*ಕುಣಿದು ಕುಪ್ಪಳಿಸುತ್ತ ಬಂತು*
*ಬಣ್ಣ ಬಣ್ಣದ ಹಾಡ ಹೊತ್ತ ದೋಣಿ*
*ಅಲೆಯ ತಲ್ಲಣದಲಿ ನದಿಯೆ ನಗೆ ಏರಿತ್ತು.*
*ಬಳ್ಳಿಗಳ ಮೈಯಲ್ಲಿ ಬೆಳದಿಂಗಳು"*[೫]

ಕವಿಯ ಈ ಕವನದ ಸಾಲುಗಳನ್ನು ಗಮನಿಸಿದಾಗ ನವೋದಯದ ಕವಿಗಳು ಕಣ್ಣುಮುಂದೆ ಬರುತ್ತಾರೆ. ನವೋದಯ ಸಾಹಿತ್ಯ ಎಂದಾಕ್ಷಣ ಸಾಮಾಜಿಕ ಬದುಕಿನ ಹೊಸ ಹೊಸ ಅನುಭವಗಳಿಗೆ ಪ್ರತಿಕ್ರಿಯಿಸುವಂತಹ ಸಾಹಿತ್ಯ ನೆನೆಪಿಗೆ ಬರುತ್ತದೆ.

ಹಾಗೆ ಕವಿ ಕಾವ್ಯ ಹಾಗೂ ಬರವಣಿಗೆಯ ಹೆಚ್ಚಳದಿಂದ ಸ್ಪಷ್ಟತೆ, ಪರಿಸರ, ಸಮಾಜ, ಮತ್ತು ವಿಶಾಲತೆಯೆಡೆಗೆ ಮುಖಮಾಡಿರುವುದನ್ನು ಕಾಣಬಹುದು.

ಈ ಕವನ ಸ್ವಲ್ಪಮಟ್ಟಿಗೆ ಬೇಂದ್ರೆಯವರ ನವೋದ್ಯದ ಕವಿತೆಯನ್ನು ಹೋಲುವಂತಿದೆ.

*"ಇಳಿದು ಬಾ ತಾಯೆ ಇಳಿದು ಬಾ*

*ಹರನ ಜಡೆಯಿಂದ*

*ಹರಿಯ ಅಡಿಯಿಂದ*

*ಋಷಿಯ ತೊಡೆಯಿಂದ*

*ನುಸುಳಿಬಾ,*

*ಶಿವನ ಮುಡಿಯಿಂದ, ಹರನ ತೊಡೆಯಿಂದ*

*ಇಳಿದು ಬಾ ತಾಯೆ"*[೬]

ಬೇಂದ್ರೆಯವರಿಗೂ ಈ ಕವಿಗೂ ಇರುವ ವ್ಯತ್ಯಾಸವೆಂದರೆ ಬೇಂದ್ರೆ ಸಾರ್ವಜನಿಕರಿಂದ ಭಿನ್ನವಾದ ಕ್ಷಣಗಳಲ್ಲು ಆಪ್ತವಾಗಿ ಉಳಿಯಬಲ್ಲರು. ಬೇಂದ್ರೆ ಪರಿಸರದೊಡಗಿನ ಭಾಷೆ ಸಂಬಂಧವನ್ನಿಟ್ಟುಕೊಂಡರೆ, ಸಿದ್ದಲಿಂಗಯ್ಯನವರು ಸಾರ್ವಜನಿಕ ಕವಿ ಎಂದೆನಿಕೊಳ್ಳುತ್ತಾರೆ.

ದೋಣಿಯ ಹಾಡು ಎಂಬ ಕವನದ ಮೊದಲಲ್ಲಿ ಪರಿಸರದ ಭಾಷೆ ವ್ಯಕ್ತವಗುತ್ತದೆ ನಂತರದಲ್ಲಿ ಮನುಷ್ಯ ಮನುಷ್ಯರ ಮಧ್ಯ ಕ್ರಾಂತಿ ಏಳುವುದನ್ನು ಚಿತ್ರಿಸುತ್ತಾ ಬರುತ್ತಾರೆ.

*"ಆ ನೀರಿನಲ್ಲಿ ತೇಲಿಬಂದೂ ಹೆಣ*

*ಮೇಲಾಡುತ್ತಿದ್ದು ಹಾವು*

*ನಕ್ಕ ಚುಕ್ಕೆಗಳೆಲ್ಲ ಕಲ್ಲಿದ್ದಲಾಗಿದ್ದು*

*ಎಷ್ಟೋ ಈ ಸಲದ ಸಾವು?"*[೭]

ಇಲ್ಲಿ ಕ್ರಾಂತಿ ಒಂದೆಡೆಯಾದರೆ ಮತ್ತೊಂದೆಡೆ ಉದ್ಗಾರವಾಚಕ ಮತ್ತು ಪ್ರಶ್ನಾರ್ಥಕವನ್ನು ಬಳಸಿಕೊಂಡಿರುವುದನ್ನು ಗಮನಿಸಬಹುದು.

ಈ ಕವನಗಳ ಭಾಷಾ ಶೈಲಿಯನ್ನು ಗಮನಿಸುತ್ತಿದರೆ ಕವಿಗೆ ಹೆಚ್ಚಾಗಿ ಆಕ್ರೋಶ, ಉದ್ವೇಗ, ಮನಸ್ಸು ಮತ್ತು ಭಾವನೆಗಳು ಚಿಂತನೆಗಳೊಡನೆಯೇ ಹೊಗುತ್ತದೆ ಎಂದೆನ್ನಿಸುತ್ತದೆ.

ಆಕ್ರೋಶ, ಕ್ರಾಂತಿಯನ್ನು ಬಿಟ್ಟು ನವ್ಯ ನವೋದಯದತ್ತ ಸ್ವಲ್ಪಮಟ್ಟಿಗೆ ಮಾತ್ರ ಎಂದೆನ್ನಿಸುತ್ತದೆ.



ಇಲ್ಲಿ ಕೆಲವು ಕವನಗಳು ಹಿಂದಿನಂತೆಯೇ ರೊಚ್ಚನ್ನು ತೋರಿದರೂ ಪ್ರೀತಿ, ಪ್ರೇಮ, ಸರಸ ಒಲವುಗಳು ಈ ಕವನ ಸಂಕಲನದಲ್ಲಿ ಪ್ರಾಮುಖ್ಯತೆ ಪಡೆದಿರುವುದನ್ನು ಕಾಣಬಹುದು.

ಈ ರೀತಿಯಲ್ಲಿ ಕವಿಯ ಮನೋಧರ್ಮ ಮೆದುವಾದದ್ದು, ವ್ಯವಸ್ಥೆಯ ಪರಮಾಡಿಕೊಂಡ ರಾಜಿಯೋ ಅಥವಾ ಮೊದಲೆರಡು ಸಂಕಲನಗಳ ಹರಿತ ಮತ್ತು ಮೊನಚು ಮುಂದೆ ಅವಶ್ಯಕವಿಲ್ಲ ಎಂಬ ನಿಲುವೋ ತಿಳಿಯದು.

ಕವಿಯ ಬರಹದ ಬಗ್ಗೆ ಕೆಲವು ವಿಮರ್ಶ್ಕರು ಹೀಗೆನ್ನುತ್ತಾರೆ.

ಡಿ.ಆರ್.ನಾಗರಾಜ್ ರವರು

"ಕವಿಗೆ ಕುವೆಂಪು ಶೈಲಿ ಮೈದಳೆದಿದ್ದರು ಅದಕ್ಕೂ ಮಿಗಿಲಾದಂತಹ ಭಿನ್ನ ಲಯ ಶರೀರ ಅವರ ಕವನಗಳಲ್ಲಿತ್ತು ಎನ್ನುತ್ತಾರೆ.

ಲಿಂಗದೇವರು ಹಳೆ ಮನೆಯವರು

"ನವೋದಯದಿಂದ ತನಗೆ ಬೇಕಾದ ಲಯ ವಿನ್ಯಾಸವನ್ನು ಜಾನಪದ ಸಾಹಿತ್ಯದಿಂದ ಅಗತ್ಯಕ್ಕೆ ಬೇಕಾದಷ್ಟು ಪದ ಸಮುಚ್ಚಯವನ್ನೂ ತೆಗೆದುಕೊಂಡ ಸಿದ್ದಲಿಂಗಯ್ಯ ತಮ್ಮ ಅಭಿವ್ಯಕ್ತಿಗೆ ಕಸುವು ತುಂಬಿದರು" ಎಂಬ ಮಾತು ಅರ್ಥಪೂರ್ಣ.

ಕವಿಯುವರು ತಮ್ಮ ಬರಹದ ವೈಶಿಷ್ಟತೆಯನ್ನು ಕಪ್ಪು ಕಾಡಿನ ಹಾಡು ಕವನ ಸಂಕಲನ "ನನ್ನ ಕವನ" ದಲ್ಲಿ ಸ್ಪಷ್ಟವಾಗಿ ಹೇಳಿದ್ದಾರೆ. ತಮ್ಮ ಕವನದ ಆಶಯವನ್ನು ಕವನದಲ್ಲೇ ಹೇಳಿರುವುದು ಸಿದ್ಧಲಿಂಗಯ್ಯನವರ ವೈಶಿಷ್ಟ್ಯವಾಗಿದೆ.

ಮೊದಲು ಬರೆದ ಹೊಲೆಮಾದಿಗರ ಹಾಡು, ಕವನದಲ್ಲಿ ಹೆಚ್ಚಾಗಿ ವ್ಯಂಗ್ಯ, ನಗು ಮತ್ತು ವಿಡಂಬನೆಯೆನೆಲ್ಲ ಕಾಣಬಹುದು. ಆದರೆ ಮುಂದಿನ ಕವನಗಳಲ್ಲಿ ಮೇಲಿನ ಅಂಶಗಳೆಲ್ಲಾ ಮಿಂಚಿನಂತೆ ಮಾಯವಾಗಿ ಸಾದುಪ್ರಾಣಿಯಂತೆ ಸಾಹಿತ್ಯವನ್ನು ಸೃಷ್ಟಿಸಿರುವುದು ಒಂದು ಊಹಾತ್ಮಕವಾದ ವಿಷಯವೇ ಸರಿಎನ್ನಿಸುತ್ತದೆ.

ಕವಿಯ ಭಾಷಾ ಶೈಲಿಗೂ ಮತ್ತು ಬರಹದ ಶೈಲಿಗೂ ಬರಬರುತ್ತಾ ವ್ಯತಿರಿಕ್ತತೆಯನ್ನು ಕಾಣಬಹುದಾಗಿದೆ.

*"ಸುಟ್ಟ ಹೆಣಗಳ ಸಾಲು ಮೆರವಣಿಗೆ*
*ಬಂದಾಗ ಪುಟ್ಟ ಕಂದಮ್ಮಗಳ*
*ಚೀರಾಟಗಳ ನಡುವೆ*
*ನಿನ್ನ ಕಣ್ಣಿನ ಮಾತು ತಿಳಿಯಲಿಲ್ಲ"*[೮]

ಭಾಷೆ ಸ್ಪುಟವಾಗಿದೆ, ಸರಳವಾಗಿದೆ, ವಾಕ್ಯರಚನೆ ಕ್ರಮಬದ್ಧವಾಗಿದೆ. ಶಿಷ್ಟ ಎಂದಾಗ ಎಲ್ಲಾ ಅಂಶಗಳು ಇಲ್ಲದಿದ್ದರೂ ಕೆಲವಾಂಶಗಳನ್ನು ಒಳಗೊಂಡಿದೆ.

ಈ ಕವನ ಬೇಂದ್ರೆಯವರ ಒಂದು ಪದ್ಯವನ್ನು ಗುರ್ತಿಸುವಂತಿದೆ.

'ಕುರುಡು ಕಾಂಚಾಣಾ' ಸಿದ್ಧಲಿಂಗಯ್ಯನವರ ಕವನದ ಸಾಲುಗಳು ಬೇಂದ್ರೆಯವರ ಪದ್ಯವನ್ನು ಮೆಲುಕು ಹಾಕುವಂತಿದೆ ಏಕೆಂದರೆ ಕೆಲವು ಭಾಷಾ ವಿದ್ವಾಂಸರ ಪ್ರಕಾರ "ಭಾಷೆ ಎಂದರೆ ಮನುಷ್ಯನ ಅನುಭವಗಳನ್ನು ಮತ್ತು ಆಲೋಚನೆಗಳನ್ನು ಇತರ ಜೊತೆ ಹಂಚಿಕೊಳ್ಳಲು ಭಾಷೆ ಮುಖ್ಯ ಎಂದಿದ್ದಾರೆ. ಹಾಗೆ ಭಾಷೆ ಎಂಬುವುದು ಕವಿಯ ಮನೋಧರ್ಮದ ಮೇಲೆ ಆಡಗಿರುತ್ತದೆ ಎಂದರೆ ತಪ್ಪಾಗಲಾರದು.

ಈ ಮೇಲಿನ ಕವನದಲ್ಲಿ ಭಾಷೆ ಶೋಷಣೆಯ ಭಾಷೆಯಾಗಿ ಮೂಡಿದೆ.

ಹಣವಂತರಿಂದ ನಡೆಯುತ್ತಿರುವ ಬಡಜನರ ಶೋಷಣೆಯ ವಿರುದ್ದ ದನಿಯೆತ್ತುವುದು ಈ ಕವನದ ಆಶಯ. ಇಡೀ ಕವನದಲ್ಲಿ ಪ್ರತಿಮೆಗಳ ಮೂಲಕ ಮಾತನಾಡುತ್ತದೆ.

ಬಾಣಗಲೂ, ಬೆಂಕಿಯ ತೂಗು, ಗುಡುಗು, ಹಡಗು, ಕುಡುಗೋಲು, ಮೆರವಣಿಗೆ ಎಂಬಿತ್ಯಾದಿ ಪ್ರತಿಮೆಗಳನ್ನು ಕಾಣಬಹುದಾಗಿದೆ.

*"ಕವಿಯ ವ್ಯಕ್ತಿತ್ವ ಬದಲಾದಂತೆ ಭಾಷೆಯ ರೂಪ ಕೂಡ ಬದಲಾಗತೊಡಗಿದೆ.*

*ಆಕಾಶದಿಂದ ನೆಲಕ್ಕೆ ಚಕ್ಕನೆ ಜಿಗಿದು*

*ಜನದ ಮುಂದೆ ಕುಣಿದು*

*ಕಾಸುರತ್ತು ಮುಗಿಲಲ್ಲಿ ಮರೆಯಾಗುವ*

*ಜುಂಜಪ್ಪೆ ಕುರ ಮೊವಗಳ ಪಡೆ*

*ಆಗಾಗ ಬರುವ ಗುರು*

*ಭಯ ಭಕ್ತಿಯನ್ನು ಹಂಚಿ*

*ಮಿಂಚುವನು ಮರದಡಿಯಲ್ಲಿ*

*ದಿನವೂ ಬರುವ ಯಜಮಾನ*

*ದೂರದಲ್ಲೇ ನಿಂತು ಗರ್ಜಿಸಿ*

*ಅಟ್ಟವನ್ನು ಕೆಲಸಕ್ಕೆ ಆಳುಗಳನು."*[6]

ಸಂಪೂರ್ಣವಾಗಿ ಭಾಷೆ ಬದಲಾಗಿದೆ ಛಂದಸ್ಸಿನ ಪ್ರಕಾರ ಕಾವ್ಯ ಮೂಡಿದೆ. ರೂಡನಾಮ (ಆಕಾಶ) (ಮರ)ಗಳನ್ನು ಬಳಸಿಕೊಂಡಿದ್ದಾರೆ. ಚತುರ್ಥಿ ಪ್ರತ್ಯಯಗಳು ಯಥೇಚ್ಛವಾಗಿ ಮೂಡಿವೆ. ನೆಲಕ್ಕೆ ಚಕ್ಕನೆ ಕೆಲಸಕ್ಕೆ ಎಂಬ ಪದಗಳು ಹಾಗೆಯೇ ತದ್ಧಿತ ಪ್ರತ್ಯಯಗಳು ಇವೆ ಕಾಸರತ್ತು ಅಂದರೆ ಇತ್ತು ಎಂಬ ಪದ ತದ್ದಿತವಾಗಿದೆ. ಹಾಗೆಯೆ ದಾತು ಪದಗಳು ಕೂಡ ಇವೆ ಕುಣಿಯುವುದರ ಭಾವ ಕುಣಿ ಇದು ದಾತು ಪದಕ್ಕೆ ಉದಾಹರಣೆಯಾಗಿದೆ. ಕೆಲವೊಂದು ಕಡೆ ದ್ವಿರುಕ್ತಿಗಳ ಬಳಕೆಯು ಇದೆ.

ಹೀಗೆ ಹಿಂದೆ ಬುದ್ಧಿಸಮಾರ್ಥ್ಯದ ಪ್ರದರ್ಶನಕ್ಕಾಗಿ ಕೇವಲ ಶಬ್ದಗಳ ಚಮತ್ಕಾರದಿಂದ ಕೂಡಿರುವ ಕುತೂಹಲ ಪದರಚನೆಯಾಗುತ್ತಿದ್ದಂತೆ ಅದನ್ನು ಚಿತ್ರಕವಿತ್ವ ಎನ್ನುತ್ತಿದ್ದರಂತೆ ಹಾಗೆ

ಮೊದಲ ಕವನಗಳಲ್ಲಿ ಸ್ವಲ್ಪ ಚಿತ್ರ ಕವಿತ್ವಕ್ಕೆ ಉದಹರಣೆಯಾಗುವಂತ ಕವನ್ಗಳು ಹೊಲೆ ಮಾದಿಗರ ಹಾಡುಗಳಲ್ಲಿ ಕಾಣಬಹುದಾಗಿದೆ. ಆದರೆ ಕಪ್ಪು ಕಾಡಿನ ಹಾಡು ಕವನಗಳಲ್ಲಿ ಸಂಪೂರ್ಣವಾಗಿ ಭಾಷಾ ಶೈಲಿ ಬದಲಾಗಿ ಸ್ಪಷ್ಟ ಛಂದಸ್ಸಿನಂತೆ ಛಂದಸಿಗೆ ಅನುಗುಣವಾಗಿ ಕವನಗಳನ್ನು ಬರೆದಿದ್ದಾರೆ.

*"ಬಡವರ ಮನೆಗೆ ಬರಲಿಲ್ಲ*
*ಬೆಳಕಿನ ಕಿರಣ ತರಲಿಲ್ಲ,*
*ಗೋಳಿನ ಕಡಲನು ಬತ್ತಿಸಲಿಲ್ಲ*
*ಸಮತೆಯ ಹೂವನು ಅರಳಿಸಲಿಲ್ಲ*
*ಪೋಲಿಸರ ಬೂಟಿಗೆ ಬಂತು*
*ಮಾಲೀಕರ ಚಾಟಿಗೆ ಬಂತು*
*ಬಂದೂಕದ ಗುಂಡಿಗೆ ಬಂತು*
*ನಲವತ್ತೇಳರ ಸ್ವಾತಂತ್ರ್ಯ"೧೦*

ಮೊದಲ ಸಾಲುಗಳಲ್ಲಿ ಆದಿಪ್ರಾಸವನ್ನು ಕಾಣಬಹುದು. ಬೆಳಕಿನ, ಗೋಳಿನ ಎಂಬ ಪದಗಳು ಆದಿಪ್ರಾಸವನ್ನು ನಿರೂಪಿಸುವಂತಹ ಪದಗಳೂ ಹಾಗೆ ವಾಕ್ಯ ರಚನೆಯು ಕೂಡ ಸರಿಯಾಗಿದೆ.

ಹಾಗೆಯೇ ಅಂತ್ಯ ಪ್ರಾಸವನ್ನು ಕೂಡ ಕಾಣಬಹುದಾಗಿದೆ. ಬರಲಿಲ್ಲ, ತರಲಿಲ್ಲ, ಬತ್ತಿಸಲಿಲ್ಲ, ಅರಳಿಸಲಿಲ್ಲ ಎಂಬ ಪದಗಳು ಅಂತ್ಯಪ್ರಾಸವನ್ನು ಗುರ್ತಿಸುತ್ತವೆ.

ಎರಡನೇ ಕವನದಲ್ಲಿ ಉತ್ರೇಕ್ಷೆಗಳು-ಜೊತೆಗೆ ದೃಷ್ಟಾಂತಗಳನ್ನು ಕಾಣಬಹುದು. ಮಾತು ಆದಿಪ್ರಾಸ ಮತ್ತು ಅಂತ್ಯಪ್ರಾಸಗಳನ್ನು ಕಾಣಬಹುದಾಗಿದೆ. ಪೋಲಿಸರ, ಮಾಲೀಕರ, ಆದಿಪ್ರಾಸವಾದರೆ, ಬಂತು, ಬಂತು, ಎಂಬುವು ಅಂತ್ಯಪ್ರಾಸಗಳಾಗಿವೆ, ಮಧ್ಯಪ್ರಾಸವನ್ನು ಕೂಡ ಗಮನಿಸಬಹುದು. ಬೂಟಿಗೆ, ಚಾಟಿಗೆ, ಗುಂಡಿಗೆ, ಎಂಬವು ಮಧ್ಯಪ್ರಾಸಪದಗಳಾಗಿ ಮೂಡಿವೆ.

ಹೀಗೆ ಕವಿ ತಮ್ಮ ಕವನಗಳಲ್ಲಿ ಚಿತ್ರಕವಿತ್ವವನ್ನು ಬಿಟ್ಟು ಛಂದಸ್ಸಿನ ದಾತಿಗೆ ಬಂದಿರುವುದನ್ನು ಕಾಣಬಹುದು ನಲವತ್ತೇಳರ ಸ್ವಾತಂತ್ರ್ಯ ಯಾರಿಗೆ ಬಂತು? ಎಲ್ಲಿಗೆ ಬಂತು? ಎಂದು ಪ್ರಶ್ನಿಸುವಲ್ಲಿಯೇ ಈ ಕವಿಗಳು ಸ್ವಾತಂತ್ರ್ಯದ ಪರಿಕಲ್ಪನೆಯನ್ನು ವಸಾಹತ್ತೋರ ಚಿಂತನೆಗಳ ಮೂಲಕ ಕಟ್ಟಿಕೊಡುತ್ತಾರೆ. ಪೋಲಿಸರ ಬೂಟಿಗೆ ಮಾಲಿಕರ ಚಾಟಿಗೆ ಬಂದ ಈ ಸ್ವಾತಂತ್ರ್ಯ ಬಡವರ ಬೆವರು ರಕ್ತ ಕುದಿಯಿತೆಂದು ವಿಡಂಬಿಸಿದ್ದಾರೆ. ಬ್ರಿಟಿಷರು ಹೋದರು. ಭಾರತೀಯರು ಅಧಿಕಾರ ಹಿಡಿದರು. ಹೀಗಾದಾಕ್ಷಣವೇ ಇದು ಸ್ವಾತಂತ್ರ್ಯವಾಗಲಾರದೆಂದು ಕವಿ ಸ್ಪಷ್ಟಪಡಿಸಿದ್ದಾರೆ. ಬಣ್ಣ ಬದಲಾದರೇನು ಒಳಗಿನ ಗುಣ ಬದಲಾಗ ಬೇಡವೆ? ಎಂಬುದು ಇಲ್ಲಿಯ ಧ್ವನಿಯಾಗಿದೆ.

ಹೀಗೆ ಅನೇಕ ದಲಿತ ಕವಿಗಳು ತಮ್ಮ ಕಾವ್ಯದ ಒತ್ತಾಸೆಯನ್ನು ತಮ್ಮ ಕವಿತೆಗಳ ಪ್ರಾರಂಭದಲ್ಲಿಯೇ ಹೇಳಿದ್ದಾರೆ. ಕನ್ನಡ ಕಾವ್ಯ ಪರಂಪರೆಯಲ್ಲಿಯೇ ದಲಿತ ಕಾವ್ಯ ವಿಶಿಷ್ಟವಾಗಲು ಕೆಲವು ಕಾರಣಗಳಿವೆ. ಜಾತಿ ವ್ಯವಸ್ಥೆಯ ಕರಾಳ ಮುಖಗಳನ್ನು ಕುರಿತು ಅನೇಕ ದಲಿತೇತರ ಕವಿಗಳು ಕಾವ್ಯ ರಚಿಸಿದ್ದರೂ ಆಮೇಲೆ ದಲಿತ ಕಾವ್ಯದಲ್ಲಿ ಪ್ರಕಟವಾದಂತೆ ರಕ್ತಮಾಂಸ ತುಂಬಿಕೊಂಡು ಬಂದಿಲ್ಲ. ಕನ್ನಡ ಕಾವ್ಯ ಕಂಡು ಕೇಳರಿಯದ ಅನೇಕ ಸಂಕಟದ ಅನುಭವಗಳನ್ನು ದಲಿತ ಕವಿಗಳು ಕಾವ್ಯವಾಗಿದ್ದಾರೆ.

ಸಾಮಾಜಿಕ ಕಳವಳ, ವರ್ಣವ್ಯವಸ್ಥೆಯ ತೀವ್ರ ಪ್ರತಿಭಟನೆ ಇವರ ಕಾವ್ಯದ ಕೇಂದ್ರವಾಗಿರುವಂತೆ ಮನುಷ್ಯನ ಅಂತಃಕರಣ ಹಾಗೂ ಜೀವಸಲೆಗೂ ಇಲ್ಲಿ ಪ್ರಾಮುಖ್ಯತೆ ನೀಡಲಾಗಿದೆ, ಹೀಗಾಗಿ ದಲಿತ ಕಾವ್ಯ ಕೇವಲ ಸಪ್ಪಳದ ಮಾತಾಗದೆ, ಸಂಯಮದ ಅಭಿವ್ಯಕ್ತಿಯೂ ಆಗಿದೆ. ಅಬ್ಬರದ ನುಡಿಗಳೊಂದಿಗೆ ಅಂತರಂಗದ ತುಡಿತವೂ ಇದೆ. ಭೋರ್ಗರೆವ ಮಳೆಯಂತೆ ಕಂಡರೂ, ಒಳಗೆ ನೋಡಿದಾಗ ತಣ್ಣಗೆ ಹನಿಸುವ ಅಂತರ್ಜಲವೂ ಕಾಣಿಸುತ್ತದೆ.

ಕವಿಯು ಕಪ್ಪು ಕಾಡಿನ ಹಾಡು ಕಾವ್ಯ ಸಂಕಲನದಲ್ಲಿ ಆಕ್ರೋಶವನ್ನು ಅಷ್ಟೊಂದು ವ್ಯಕ್ತಪಡಿಸಿಲ್ಲ. ಬದಲಾಗಿ ಪ್ರಶ್ನಾರ್ಥಕವಾಗಿ ಮತ್ತು ಉತ್ಪ್ರೇಕ್ಷೆಯನ್ನು ಬಳಸಿ ಕವನಗಳನ್ನು

ಬರೆದಿದ್ದಾರೆ. ಜೊತೆಗೆ ಪ್ರೀತಿ, ಪ್ರೇಮ, ದೇವರು ಎಂಬ ಸಂಕೇತಗಳ ಮೇಲೆ ಅವರ ಭಾಷೆ ಕವನಗಳಾಗಿ ಮೂಡಿವೆ ಎನ್ನಬಹುದು.

ಕವಿಯ ಕಾವ್ಯ ಮಾದಲಿಗೆ ಸಾಧ್ಯವಾದದ್ದು ಪರಂಪರೆಯ ಬಗೆಗಿನ ಅಪಾರ ರೋಷದಿಂದಾಗಿ, ಸಂಪ್ರದಾಯದ ಬಗೆಗಿನ ಸರಳವಾದ ನಿಟ್ಟಿಗೆ ಹಾಡುಕಟ್ಟುವ ಗುಣ ಸಹಜವಾಗಿಯೇ ಬಂದು ಬಿಟ್ಟಿದೆ.

ಹೀಗೆ ಪ್ರತಿಯೊಂದು ಕವನಸಂಕಲನಕ್ಕೆ ಒಂದೊಂದು ಸಂಕೇತವನ್ನು ಇಟ್ಟುಕೊಂಡು ಭಾವನೆಗಳ ಭರವಸೆಯನ್ನು ಒಂದು ಭಾಷಾ. ಮಾಧ್ಯಮವಾಗಿ ಕವನಗಳನ್ನು ಹೊರತಂದಿರುವುದು ಪ್ರಯೋಜನಕಾರಿಯಾದ ಸಂಗತಿಯಾಗಿದೆ.

## ಅಡಿ ಟಿಪ್ಪಣಿ

೧. ಮೆರವಣಿಗೆ, ಡಾ॥ಸಿದ್ಧಲಿಂಗಯ್ಯ, ಅಂಕಿತಪುಸ್ತಕ, ಬೆಂಗಳೂರು, ೨೦೦೦, ಪು.ಸಂ:೧೧೯

೨. ಮೆರವಣಿಗೆ, ಡಾ॥ಸಿದ್ಧಲಿಂಗಯ್ಯ, ಅಂಕಿತಪುಸ್ತಕ, ಬೆಂಗಳೂರು, ೨೦೦೦, ಪು.ಸಂ:೧೨೧

೩. ಮೆರವಣಿಗೆ, ಡಾ॥ಸಿದ್ಧಲಿಂಗಯ್ಯ, ಅಂಕಿತಪುಸ್ತಕ, ಬೆಂಗಳೂರು, ೨೦೦೦, ಪು.ಸಂ:೧೨೩

೪. ಮೆರವಣಿಗೆ, ಡಾ॥ಸಿದ್ಧಲಿಂಗಯ್ಯ, ಅಂಕಿತಪುಸ್ತಕ, ಬೆಂಗಳೂರು, ೨೦೦೦, ಪು.ಸಂ:೧೨೫

೫. ಮೆರವಣಿಗೆ, ಡಾ॥ಸಿದ್ಧಲಿಂಗಯ್ಯ, ಅಂಕಿತಪುಸ್ತಕ, ಬೆಂಗಳೂರು, ೨೦೦೦, ಪು.ಸಂ:೧೨೬

೬. ಗಂಗಾವತರಣ, (ಸಂ) ಕೆ.ಎಸ್.ಶರ್ಮ, ಶರ್ಮಾ ಪ್ರಕಾಶನ, ಹುಬ್ಬಳ್ಳಿ, ೨೦೦೧. ಪು.ಸಂ:೪

೭. ಮೆರವಣಿಗೆ, ಡಾ॥ಸಿದ್ಧಲಿಂಗಯ್ಯ, ಅಂಕಿತಪುಸ್ತಕ, ಬೆಂಗಳೂರು, ೨೦೦೦, ಪು.ಸಂ:೧೨೭

೮. ಮೆರವಣಿಗೆ, ಡಾ॥ಸಿದ್ಧಲಿಂಗಯ್ಯ, ಅಂಕಿತಪುಸ್ತಕ, ಬೆಂಗಳೂರು, ೨೦೦೦, ಪು.ಸಂ:೧೨೯

೯. ಮೆರವಣಿಗೆ, ಡಾ॥ಸಿದ್ಧಲಿಂಗಯ್ಯ, ಅಂಕಿತಪುಸ್ತಕ, ಬೆಂಗಳೂರು, ೨೦೦೦, ಪು.ಸಂ:೧೩೩

೧೦. ಮೆರವಣಿಗೆ, ಡಾ॥ಸಿದ್ಧಲಿಂಗಯ್ಯ, ಅಂಕಿತಪುಸ್ತಕ, ಬೆಂಗಳೂರು, ೨೦೦೦, ಪು.ಸಂ:೧೩೮

# ಅಧ್ಯಾಯ – ೫

## ಹೊಸಕವಿತೆಗಳು (೨೦೦೦): ಕವನ ಸಂಕಲನ ಭಾಷೆಯ ಬದಲಾವಣೆ

*"ಸಂಕಷ್ಟಗಳ ಸೂರ್ಯ ದಿನದಿನವು ಮೂಡುವನು*

*ಮುಳುಗುವನು ವೇದನೆಯ ಹಬ್ಬದಲ್ಲಿ*

*ಕುದಿವ ನೀಲಿಯ ಕಡಲು ಏಳೆದೆಯ ಕಾಳಿಂಗ*

*ಹೆಪ್ಪುಗಟ್ಟಿದ ನೋವು ಮುಗಿಲಿನಲ್ಲಿ."*[1]

ಕವಿಯ ಭಾಷೆ ಹೊಸ ಕವಿತೆಗಳು ಎಂಬ ಹೆಸರಿಗೆ ತಕ್ಕಂತೆ ಸಂಪೂರ್ಣವಾದ ಬದಲಾವಣೆಯನ್ನು ಕಂಡಿದೆ ಎಂದು ಹೇಳಬಹುದು. ಹೊಲೆಮಾದಿಗರ ಹಾಡು ಕವನ ಸಂಕಲನದಲ್ಲಿ ಕೆಳದರ್ಜೆಯ ಭಾಷೆಯನ್ನು ಬಳಸಿದ್ದಾರೆ ಆದರೆ ಎಲ್ಲಾ ಕವನಗಳಲ್ಲಿಯೂ ಕೂಡ ಪ್ರತಿಯೊಂದು ಹೆಜ್ಜೆ ಹೆಜ್ಜೆಗೂ ದಲಿತರ ನೋವು-ದುಃಖ ದುಮ್ಮಾನಗಳನ್ನೆ ವ್ಯಕ್ತಪಡಿಸುವಂತಹ ಭಾಷಾ ಶೈಲಿಯನ್ನು ಬಳಸಿಕೊಂಡಿದ್ದಾರೆ.

ಇಕ್ರಲಾ, ವದೀರ್ಲಾ ಎಂಬಂತಹ ಭಾಷಾ ಬಳಕೆಗೂ ಹೊಸ ಕವಿತೆಗಳಲ್ಲಿ ಮೂಡಿ ಬಂದಿರುವಂತಹ ಭಾಷಾ ಬಳಕೆಗೂ ತೀರ ವ್ಯತ್ಯಾಸವನ್ನು ಕಾಣಬಹುದಾಗಿದೆ.

ಈ ಮೇಲಿನ ಕವನದ ಅರ್ಥ ಪ್ರಧಾನವಾಗಿ ದಲಿತರ ಕಷ್ಟಗಳನ್ನು ತಿಳಿಸಿದರೆ ಭಾಷೆ ಮಾತ್ರ ಸರಳವಾಗಿ ಬಹುಬೇಗ ಓದುಗನಿಗೆ ಅರ್ಥವಾಗುವಂತ ಭಾಷೆಯಾಗಿದೆ.

ಹೊಸ ಕವಿತೆಗಳು ಕವನದ ಭಾಷೆ ನವ್ಯ ಸಾಹಿತ್ಯವನ್ನು ಹೋಲುವಂತಹ ಸಾಹಿತ್ಯ ಭಾಷೆಯಾಗಿದೆ. ಮೊದಲು ಬರೆದಂಥ ಕವನಗಳು ದಲಿತ-ಬಂಡಾಯಕ್ಕೆ ಬಲಿಯಾದ್ದಂತಹ ಕವನಗಳಾದರೆ ಹೊಸ ಕವಿತೆಗಳು ಸಂಕಲನದಲ್ಲಿ ಬರೆದಿರುವಂತಹ ಕವನಗಳು ದಲಿತ-ಬಂಡಾಯಕ್ಕೆ ಬಲಿಯಾದಂತಹ ಕವನಗಳಾದರೆ ಹೊಸ ಕವಿತೆಗಳು ಸಂಕಲನದಲ್ಲಿ ಬರೆದಿರುವಂತಹ ಕವನಗಳು ನವ್ಯ ಅಂದರೆ ಹೊಸ-ಹೊಸ ವಿಷಗಳತ್ತ ದಾಪುಗಾಲು ಹಾಕಿರುವುದನ್ನು ನಾವು ಕಾಣಬಹುದಾಗಿದೆ.

ನಿನ್ನ ಸಾಗರದೊಡಲ ಅನುಕಂಪದಲೆಯಲ್ಲಿ ಈ ಲೋಕ ತೇಲುತಿದೆ ನೌಕೆಯಂತೆ ಬೆಂಗಾಡಿನಲ್ಲಿ ನಿನ್ನ ತಂಗಾಳಿ ಬೀಸುವುದು ಮಳೆ ಬೆಳೆಯು ನಿನ್ನದೆಯ ಬಯಕೆಯಂತೆ.

ಹೊಸ ಕವಿತೆಗಳಲ್ಲಿನ ಕವನಗಳು ಬೆಳೆಯುತ್ತಿದ್ದಾಗೆ ಕವಿಯ ಭಾವನೆಗಳು ಭಾಷಾ ಸಂವೃದ್ದಿಯತ್ತ ಸಾಗುತ್ತಿದೆ ಎನ್ನುವುದಕ್ಕೆ ಈ ಹೊಸ ಕವಿತೆಗಳೆ ಸಾಕ್ಷಿಯಾಗಿ ನಿಂತಿವೆ. ಇಲ್ಲಿನ ಭಾಷೆಯ ಅಂದವನ್ನು ಗಮನಿಸಿದಾಗ ಹಿಂದಿನ ಭಾಷಾ ಶೈಲಿಗೂ ಇಂದಿನ ಭಾಷಾ ಶೈಲಿಗೊತ್ತಾಗುತ್ತದೆ.

ಸಾಗರ + ಒಡಲು (ದೇಹ)

ಅನುಕಂಪವೆಂಬ, 'ಅಲೆ'

ಲೋಕ–ನೌಕೆ

ಬೆಂಗಾಡು–ತಂಗಾಳಿ

ಮಳೆ–ಬೆಳೆ

ಈ ಮೇಲಿನ ಪದಗಳನ್ನು ಗಮನಿಸಿದಾಗ ಸಂಕಷ್ಟಗಳ ಸರಮಾಲೆಯಿಂದ ಗೆದ್ದು ವಿಜಯದತ್ತ ಸಾಗುತ್ತಿದ್ದ ಎಂದೆನಿಸುತದೆ. ಈ ಕವನದ ಆಶಯದಂತೆ ಕವಿಯ ಬರವಣಿಗೆಯು ಕೂಡ ವಿಜಯದ ಬಾಗಿಲನ್ನು ತಟ್ಟುವಂತೆ ಕಾಣಿಸುತ್ತಿವೆ.

ಆಕ್ರೋಶದ ಭಾಷೆಗೆ ಸಾಹಿತ್ಯದ ಭಾಷೆಗೂ ತುಂಬಾ ವ್ಯಾತ್ಯಾಸವಿದೆ. ಕವಿಯವರು ಆಕ್ರೋಶದಿಂದ ಆತ್ಮೀಯತೆಡೆಗೆ ಬಂದಿರುವುದು ಹೊಸ ಕವಿತೆಗಳ ಕವನಗಳಲ್ಲಿ ಕಾಣಬಹುದಾಗಿದೆ.

ಮೇಲೆ ಬಳಸಿರುವಂತ ಪದಗಳು ವಿಶಾಲವಾದ ಅರ್ಥವನ್ನು ಪಡೆದುಕೊಂಡಿರುವಂತ ಭಾಷಾ ಶೈಲಿಯಾಗಿದೆ. ಸಣ್ಣ ಸಣ್ಣ ವಿಷಯಗಳಿಗೆ ಸಾಗರ ತಂಗಾಳಿ, ಲೋಕ, ಅಲೆ, ನೌಕೆ, ಬೆಂಗಾಡು, ಮಳೆ, ಬೆಳೆ ಎಲ್ಲವನ್ನು ಬಳಸಲು ಸಾಧ್ಯವಿಲ್ಲ ಭಾಷಾ ಸಂವೃದ್ಧಿಯನ್ನು ಇಲ್ಲಿ ಕಾಣಬಹುದಾಗಿದೆ.

*"ಕೊಡಲಿಯ ಏಟಿಗೆ ಗಡಗಡ ನಡುಗಿ*
*ನರಳುತ್ತಿರುವುದು ಏನಣ್ಣ*
*ಅದು ಮರವಲ್ಲ ಅದು ಬೇರಲ್ಲ*
*ಗ್ರಾಮದೇವತೆ ತಿಳಿಯಣ್ಣ."*[1]

ಕವಿಯ ಮನಸ್ಸು ಮತ್ತು ಭಾವನೆಗಳು ಹಾಗೂ ಕಾಲ ಬದಲಾದಂತೆಲ್ಲಾ ಅನುಕರಣೆಯು ಕೂಡ ಹೆಚ್ಚಾಗಿದೆ. ಈ ಕವನ ಪಂಚೆಮಂಗೇಶರವರ ಪದವನ್ನು ಹೋಲುತ್ತದೆ.

ಗಡ–ಗಡ ಇದು ಅನುಕರಣವಾಚಿಯಾಗಿದೆ. ಈ ಗಡ ಗಡ ಎಂಬ ಶಬ್ದದ ರೂಪ ಇಡೀ ಚರಣದ ಅರ್ಥವನ್ನು ಮೈ ಪುಳಕಿಸುವಂತೆ ಚಿತ್ರಿಸುತ್ತದೆ.

ಕೊಡಲಿಯ ಏಟಿಗೆ ಗ್ರಾಮದೇವತೆಯು ಕೂಡ ನಡುಗುವಂತೆ ಪರಿಸ್ಥಿತಿಯುಂಟಾಗಿದೆ. ಅಂದರೆ ಇಲ್ಲಿ ಗ್ರಾಮ ದೇವತೆ ಎಂಬುವುದು ದಲಿತರ ಸಂಕೇತವನ್ನು ಪ್ರಕಟಪದಿಸುತ್ತದೆ.

ಹಾಗೆ ಎರಡನೆಯ ಸಾಲಿನಲ್ಲಿ ನರಳುತ್ತಿರುವುದು ಏನಣ್ಣ ಇದು ಒಂದರ್ಥದಲ್ಲಿ ಪ್ರಶ್ನಾರ್ಥಕ ಚಿಹ್ನೆ ರೂಪವನ್ನು ತೋರಿಸಿದರು ಮತ್ತೊಂದು ಕಡೆಗೆ ವ್ಯಂಗ್ಯವನ್ನು ಚಿತ್ರಿಸುತ್ತದೆ.

ಇಲ್ಲಿ ಬಳಕೆಯಾಗಿರುವ ಭಾಷೆ ಗದ್ಯದ ರೂಪದಲ್ಲಿದೆ. ಮೇಲ್ನೋಟಕ್ಕೆ ನಾಲ್ಕು ಸಾಲುಗಳಿಂದ ಕೂಡಿರುವ ಪದ್ಯದಂತೆ ಕಂಡು ಬರುತ್ತದೆ ಆದರೆ ಇದು ಓದಲು ಗದ್ಯದಂತೆ ಇದೆ.

ಬಿಡಿ ಬಿಡಿಯಾದ ಪದಗಳ ಗುಚ್ಚ ಓದುಗನಿಗೆ ತಟ್ಟನೆ ಅರ್ಥ ಹೊಳೆಯುವ ಭಾಷಾ ಶೈಲಿ ವಾಕ್ಯ ರಚನೆ ಎರಡು ಎರಡು ಸಾಲಿಗೆ ಒಂದೊಂದು ವಾಕ್ಯವನ್ನು ನಿರೂಪಿಸುವ ಭಾಷಾ ಶೈಲಿಯನ್ನು ಕಾಣಬಹುದಾಗಿದೆ.

*"ಕಾಡನು ದೋಚಿ ನಾಡನು ಮಾರಲು*
*ಗುಳ್ಳೇ ನರಿಗಳು ಬರುತಿಹರು*
*ಈ ಬೂಳರ ಆಟ ನಿಲ್ಲಿಸಲೆಂದು*
*ಜನಸಮುದಾಯವೆ ಎದ್ದೇಳಿ"*[2]

ಇಲ್ಲಿನ ಪದಗಳ ಜೋಡಣೆ ಪ್ರಾಸ ಬದ್ದವಾಗಿವೆ ಹಾಗೂ ಲಯಬದ್ಧವಾಗಿವೆ. ಹೋಲಿಕೆ ತುಂಬ ಅರ್ಥಗರ್ಭಿತವಾಗಿದೆ. ವರ್ಣ ಮಾಲೆಯಲ್ಲಿ ಬರುವ ವ್ಯಂಜನಾಕ್ಷರ ಅಂದರೆ ಎರಡನೆ ಖ್ ಕಾರವನ್ನು ಸಮಯಕ್ಕೆ ತಕ್ಕಂತೆ ಅರ್ಥಕ್ಕೆ ಬದ್ಧವಾಗಿ ಬಳಸಿಕೊಂಡಿರುವ ಭಾಷಾ ರೂಪ ಚೆನ್ನಾಗಿದೆ ಎಂದು ಹೇಳಬಹುದು.

ಇಲ್ಲಿ ಕಾಡನು ದೋಚಿ ನಾಡನು ಮೊರಲು ಗುಳ್ಳೆ ನರಿಗಳು ಬರುತಿಹರು. ಅಂದರೆ ದಂಗೆಕೊರರನ್ನು ಗುಳ್ಳೆನರಿಗಗೆ ಹೋಲಿಕೆ ಮಾಡಿರುವುದು ಅರ್ಥಪೂರ್ಣಲಾಗಿದೆ ಜನಸಮುದಾಯಕ್ಕೆ ಎಚ್ಚರಿಕೆಯನ್ನು ನೀಡುವಂತಹ ಪದ 'ಎದ್ದೇಳಿ' ಎಂಬ ಪ್ರದ ಪ್ರಯೋಗ ನಿದ್ರಸುವಂತಹ ಜನರನ್ನು ಅಂದರೆ ಅಮಾಯಕರಿಗೆ ತಿಳುವಳಿಕೆಯನ್ನು ನೀಡುವಂತೆ ಭಾಷೆ ಶೈಲಿಯನ್ನು ಈ ಮೇಲಿನ ಕವನದಲ್ಲಿ ಬಳಸಿಕೊಂಡಿರುವುದನ್ನು ಕಾಣಬಹುದಾಗಿದೆ.

*"ದಶಾವತಾರದ ದಂಥೆಯಲ್ಲಿ*
*ಕುರಿಮರಿಗಳ ಈ ಮಂದೆಯಲ್ಲಿ*
*ದಯೆಕರುಣೆಯ ಆ ಮುಖವೆಲ್ಲಿ"*[9]

ದಶಾವತಾರ ಕವನದಲ್ಲಿ ಕವಿ ತಮ್ಮ ಬರವಣಿಗೆಯ ಪ್ರಬುದ್ದತೆ ಮತ್ತೇ ಮನಸೂಚನೆಯ ಪರಿಯನ್ನು ಕುರಿತು ಹೇಳುತ್ತಿದ್ದಾರೆ.

ಪದಗಳ ಜೊತೆ ಆಟವಾಡುವ ಶೈಲಿಯನ್ನು ಕಾಣಬಹುದು. ದಶಾ (ಹತ್ತು) ಅವತಾರದ ದಂಥೆ ಕವಿಮರಿಗಳ ಎಂಬ ಪದವು ಅಷ್ಟೆ ಪ್ರಾಸ ಬದ್ಧವಾಗಿದೆ, ಹೀಗೆ ಕಾವ್ಯದ ಉದ್ದಕ್ಕೂ ಕೂಡ ಒಂದಕ್ಕೊಂದು ಪದ ಜೋಡಣೆಯ ರೀತಿಯಲ್ಲಿಯೇ ಛಂದೋ ರೀತಿಯಲ್ಲಿಯೇ ಕವನವನ್ನು ಬರೆದಿದ್ದಾರೆ.

ಮೊದಲು ಕಾಣಿಸಿಕೊಂಡ ದಲಿತ ಭಾಷೆಗೂ ನಂತರದ ಭಾಷೆಗೆ ಅಂತರವನ್ನು ಕಾಣಬಹುದು. ಅದೇ ರೀತಿ ಜಾತಿಯನ್ನು ಮತ್ತು ದಲಿತರ ದುಃಖ ವೇದನೆಯನ್ನು ಕುರಿತು ಕಾವ್ಯವನ್ನು ರಚನೆ ಮಾಡುತ್ತಿದ್ದ ಕವಿ ಹೊಸಕವಿತೆಗಳಲಿ ದೇಶದ ಬಗ್ಗೆ ಕುರಿತು ಹೇಳಲು ಹೊರಟಿದ್ದಾರೆ.

*"ನೀವು ಧನ್ಯರು ಗಾಂಧಿ, ನೀವು ದೇವರು ಗಾಂಧಿ,*

*ನಾವಿಂದು ಸೈತಾನರೇಕಾದೆವು*

*ಅಂತರಂಗದ ಮಾತ ಏಕೆ ಮರೆತವು ನಾವು*

*ಏಕೆ ಭಾರತವನ್ನು ಬಲಿಕೊಟ್ಟೆವು"*[9]

ಸಮಯ ಸಮಯತೆಗಳು ಬದಲಾದಂತೆಲ್ಲಾ ಪ್ರತಿಯೊಬ್ಬ ಮನುಷ್ಯನ ಜೀವನವು ಕೂಡ ಬದಲಾಗಬೇಕು ಎನ್ನುವ ನುಡಿಯಂತೆ ಚೀಪಾಂಜಿಯಿಂದ ಆದಿಮಾನವ-ಆದಿಮಾನವನಿಂದ ನಾಗರೀಕತೆಯ ಮಾನವ ಹೀಗೆ ಬದಲಾದಂತೆಲ್ಲ ಎಲ್ಲವು ಕೂಡ ಬದಲಾಗಬೇಕು ಅಲ್ಲವೆ ಹಾಗೆ ಕವಿಯ ಮನಸ್ಸು ಕೂಡ ಬದಲಾಗಿ ಸಮಾನತೆಯೆಡೆಗೆ ಕವಿ ದಾಪುಗಾಲು ಹಾಕಿರುವುದನ್ನು ಈ ಕವಿತೆಯಲ್ಲಿ ಕಾಣಬಹುದು.

ಬಡತನದ ಬೇಗೆಯನ್ನು ಮಾತ್ರ ತಮ್ಮ ಕವನಗಳಲಿ ಬರೆಯುತ್ತಿದ್ದ ಕವಿ ಸ್ವಾತಂತ್ರ್ಯ ಹೋರಾಟಗಾರಾದ ಗಾಂಧೀಯ ವ್ಯಕ್ತಿತ್ವವನ್ನು ಕುರಿತು ಬರೆಯಲು ಯತ್ನಿಸಿದ್ದಾರೆ.

ಇಲ್ಲಿ ವ್ಯಕ್ತಗೊಂಡಿರುವಂತಹ ಭಾಷೆ ಶ್ರೇಷ್ಠವಾದದ್ದು ಮತ್ತು ಒಬ್ಬ ಮಹಾನ್ ವ್ಯಕ್ತಿಯನ್ನು ದೈವತ್ವಕ್ಕೆ ಹೋಲಿಕೆ ಮಾಡುತ್ತಿರುವುದು ಒಂದು ಒಳ್ಳೆಯ ಸಂಗತಿ. ಅಂದಿನ ಗಾಂಧಿಯನ್ನು ದೇವರೆಂದು ಇಂದು ನಾವು ಕೆಲಸಕ್ಕೆ ಬಾರದವರೆಂದು ಆತ್ಮಸಾಕ್ಷಿಯೇ ಇಲ್ಲದವರೆಂದು ಹೇಳುತ್ತಿದ್ದಾರೆ. ಓದುಗನ ಮನಸ್ಸಿಗೆ ನಾಟುವಂತೆ ಸರಳ ಭಾಷೆಯಲ್ಲಿ ಗಾಂಧಿಯೆ ಜೀವನವನ್ನು ಹೊಗಳಿದ್ದಾರೆ.

ಹೀಗೆ ದೇಶದ ಬಗ್ಗೆ ಬರೆಯುತ್ತಾ ಬಂದ ಕವಿ ಜನಗಳ ಅಜ್ಞಾನ ಮತ್ತು ಅಂಧಕಾರವನ್ನು ಹೇಳಲು ಹೋರಟಿದ್ದಾರೆ.

*"ಪ್ರೀತಿಯ ಗಂಗೆ ಹರಿಯುತಲಿರಲಿ*

*ಅಂತರಂಗದ ಕಣಿವೆಯಲ್ಲಿ*

*ಮೈತ್ರಿಯ ಮಲ್ಲಿಗೆ ಪರಿಮಳ ಬಿರಲಿ*

*ಎದೆಯಾಳದ ಹೂದೋಟದಲಿ"*[10]

ಈ ಕವಿತೆ ನವೋದಯ ಕಾಲವನ್ನು ಕುರಿತು ಹೇಳುತ್ತಿದೆ. ನವೋದಯ ಸಾಹಿತ್ಯವು ಹೇಗೆ ಇರಬೇಕು ಎಂಬುವುದನ್ನು ಹಲವು ವಿಮರ್ಶಕರು ಹೇಳಿದ್ದಾರೆ. ಅದೇ ರೀತಿ ಇಲ್ಲಿ ಕವಿ ಪ್ರೀತಿ ಎಂಬ ಗಂಗೆಯನ್ನು ಅಂತರಂಗದ ಅತ್ತಿರಕ್ಕೆ ಕರೆದೊಯ್ಯುತ್ತಿದ್ದರೆ.

ಮೇಲು ಕೀಳುಗಳು ಅಂತರವನ್ನು ಬಿಚ್ಚಿಟ್ಟು ಎಲ್ಲರಲ್ಲಿ ಪರಿಮಳವನ್ನು ಬೀರುವಂತಾಗಲಿ ಎಂದು ನವೋದಯದ ಸಾಹಿತ್ಯವನ್ನು ಕುರಿತು ಹೀಳುತ್ತಿದ್ದಾರೆ. ಪದಗಳ ಪ್ರಾಸಬದ್ಧತೆ ಮತ್ತು ಬರಹ ಅರ್ಥಬದ್ಧವಾಗಿದೆ.

*ಜೊತೆಗೆ ಧೈರ್ಯವನ್ನು ಹೇಳುವುದರ ಮೂಲಕ ಕವಿತೆಗಳನ್ನು ಬರೆಯಲು ಯತ್ನಿಸಿದ್ದಾರೆ.*

*ಉರಿಯಿದೆ ವಿಷಯವಿದೆ ಇರಿಯುವ ಅಲಗಿದೆ*

*ಎನ್ನುವ ಅಂಜಿಕೆ ಈಗೇಕೆ*

*ಕನಸು ಕವಿತೆಗಳ ಹುಣ್ಣಿಮೆಯಿರಲು*

*ಮುಂದಿನ ದುಗುಡದ ಮಾತೇಕೆ.*

ಸಾವಿರಾರು ನದಿಗಳು ಕವನ ಸಂಕಲನದಲ್ಲಿ ಮತ್ತು ಮೊದಲ ಪ್ರಕಟಗೊಂಡ ಹೊಲೆಮಾದಿಗರ ಕವನ ಸಂಕಲನದಲ್ಲಿ ಬರೀ ಶೋಷಣೆಯನ್ನು ಕುರಿತು ಹೇಳಿದ ಕವಿ ಅಜ್ಞಾನವೆಂಬ ಕತ್ತಲೆಯ ಕೋಣೆಯಿಂದ ಹೇಗೆ ಜನರು ಹೊರಗೆ ಬರಬೇಕು ಎಂಬುವುದನ್ನು ತಿಳಿಸಿದ್ದಾರೆ.

ಇಲ್ಲಿನ ಭಾಷೆ ಜನರನ್ನು ಬಡಿದು ಎಚ್ಚರಿಸುವಂತಿದೆ, ಉರಿಯಿದೆ, ವಿಷವಿದೆ, ಇರಿಯುವ ಅಲಗಿವೆ ಎಂಬ ಪದಗಳು ದೌರ್ಜನ್ಯದ ದಬ್ಬಾಳಿಕೆಯನ್ನು ತಿಳಿಸುತ್ತಿವೆ.

ಇಲ್ಲಿನ ಭಾಷಾ ಉತ್ಪ್ರೇಕ್ಷೆ ಅರ್ಥಗರ್ಭಿತವಾಗಿದೆ. ಹೀಗೆ ಹೇಳುತ್ತಾ ಕನವರಿಕೆ ಕವನದಲ್ಲಿ ಸಂಸ್ಕೃತಿಯನ್ನು ಕುರಿತು ಹೇಳುತ್ತಿದ್ದಾರೆ.

ಹೀಗೆ ಸುಂದರವಾದ ಸರಳ ಅಭಿವ್ಯಕ್ತಿಯಲ್ಲೇ ತಮ್ಮ ಕಾವ್ಯದ ನೆಲೆಗಟ್ಟನ್ನು ಹೇಳಲು ಹೋರಟ ಕವಿ ತಾವೇ ಕವಿತೆ ಕನವರಿಕೆ ಎಂಬ ಕವಿತೆಯಲ್ಲಿ ಕನವರಿಸುವ, ಹಂಬಲಿಸುವ ಮತ್ತು

ಹಾರೈಸುವ ಪರಿಯನ್ನು 'ಹೊಸ ಕವಿತೆಗಳು' ಸಂಕಲನದ ಕನವರಿಕೆ ಕವನದಲ್ಲಿ ಪ್ರತಿಬಿಂಬಿತವಾಗಿದೆ.

*ಅಪರಿಚಿತ ಕಣಿವೆಗಳಲ್ಲಿ ಪ್ರೀತಿಯ ಪ್ರವಾಹ ಉಕ್ಕಿ ಭೀತಿಯ ಬಂಡೆಗಳ ಕರಗಲೆಂದು............*

*ಎಂದು ಇವರ ಕವಿತೆ ಕನವರಿಸಿದರೆ................*

*ಅಪರಾತ್ರಿಯಲ್ಲಿ ಕತ್ತು ಹಿಸುಕುವ ಕೈಗಳು ವೆಚ್ಚ ಕೆಳಗಿಳಿಯಲೆಂದು.........*

*ಅವರ ಕವಿತೆ ಹಂಬಲಿಸುತ್ತದೆ,*

ಆದರೆ ಈ ಕನವರಿಕೆ ಮತ್ತು ಹಂಬಲಿಸುವಿಕೆಗಿಂತ ಅವರ ಕವಿತೆ ಹಾರೈಸುವ ಪರಿ ಮಾತ್ರ ತುಂಬಾ ವಿಶಿಷ್ಟವಾದುದು.

*"ಕಲ್ಲು ಕಟ್ಟಡದೆದುರು ಕೈಚೆಲ್ಲಿ ಕುಳಿತವರ*
*ನಿಟ್ಟುಸಿರು ದಿಕ್ಕಾರವಾಗಲೆಂದು*
*ಒಡೆತ ಹೊಡೆತಕ್ಕೆ ಸಿಕ್ಕಿ ಭೂಗತರಾದವರು*
*ಒಂದೇ ನೆಗೆತಕ್ಕೆ ಉತ್ತರ ಕೊಡಲೆಂದು*
*ಅಕ್ಷರ ಅಗ್ನಿಕುಂಡದಲ್ಲಿ*
*ಸಿಟ್ಟು ಧಗಧಗಿಸಿ ಉರಿಯುತ್ತಿರಲೆಂದು*
*ನನ್ನ ಕವಿತೆ ಹಾರೈಸುತ್ತದೆ."*[2]

ಎಂಬ ಸಾಲುಗಳು ಇಡೀ ದಲಿತ ಸಂಸ್ಕೃತಿಗೆ ಈ ಕವಿಯ ಕಾವ್ಯ ತೊಡಬೇಕಾದ ಅಪೇಕ್ಷೆಯನ್ನು ಸೂಚಿಸುವಂತಿದೆ. ಇಡೀ ಕವನದಲ್ಲಿ ದಲಿತರ ಎಚ್ಚರಮಡುಗಟ್ಟಿದೆ.

ಹಿಂದಿನ ಕವನಗಳ ಭಾಷಾ ಶೈಲಿಗೆ ಹೋಲಿಕೆ ಮಾಡಿಕೊಂಡರೆ ಈ ಕವಿತೆಗಳ ಭಾಷಾ ಶೈಲಿ ಸೊಬಗನ್ನು ಕಂಡಿದೆ ಎಂದು ಹೇಳಬಹುದು. ಇಕ್ರಲಾ ವದೀರ್ಲ್ಲಾ ಎಂಬಂತ ಭಾಷೆ ಹೋಗಿ ಸಾಮಾಜಿಕ ಸಮುದಾಯದತ್ತ ಭಾಷೆ ವಿಸ್ತರಕೊಂಡಿದೆ ಎಂದರೆ ತಪ್ಪಾಗಲಾರದು. ಒಂದು ಸೃಜನಶೀಲ ಹಾಗೂ ತಾತ್ವಿಕ ಪ್ರತಿಕ್ರಿಯೆಯಾಗಿದೆ ಇಲ್ಲಿ ಕವಿಯು ತಮ್ಮ ಸಹಜ ಸ್ಥಿತಿಯನ್ನು ಅದರ ಜೊತೆ ತಳಕು ಹಾಕಿದ್ದಾರೆ ಎಂದರೆ ತಪ್ಪಾಗಲಾರದು.

ಹೊಲೆಮಾದಿಗರ ಹಾಡು ಕವನಸಂಕಲದಲ್ಲಿನ ಭಾಷಾ ಪರಿ ದಾರಕಾರವಾಗಿ ಕವನದ ಸೃಷ್ಟಿಗೋಸ್ಕರ ರಚನೆ ಮಾಡಿದ ಕವಿ ಮುಂದಿನ ಕವನಗಳನ್ನು ಬರೆಯುವಲ್ಲಿ ಅರ್ಥಗರ್ಭಿತವಾದ ಪದ ಸಮುಚಾಯವನ್ನು ಬಳಸಿ ಹೊಸಗನ್ನಡದ ಸಾಹಿತ್ಯದತ್ತ ಕೊಂಡೊಯ್ದಿದ್ದಾರೆ ಎಂಬುವುದನ್ನು ಹೊಸಕವಿತೆಗಳು ಕವನಸಂಕಲನದಲ್ಲಿನ ಕವನವನ್ನು ಗಮನಿಸಬಹುದು.

*"ಹಕ್ಕಿಗಳು ಚುಕ್ಕೆಗಳು ಮುಗಿಲ ಸಾಲಿನ ಬದಲು*
*ಕತ್ತು ಹಿಸುಕುವ ಕುಯ್ಯಿಬಾನಿನಲ್ಲಿ*
*ಹೂ ಹಣ್ಣು ಹೆಜ್ಜೇನು ಗೆಜ್ಜೆಗಳ ದನಿಯಿಲ್ಲ*
*ಒಡಲು ಸೀಳುವ ಬೆಂಕಿ ಭೂಮಿಯಲ್ಲಿ"*[೮]

ದಲಿತ ಸಾಹಿತ್ಯದ ವಿಶೇಷತೆಗಳಲ್ಲಿ ಭಾಷೆ ಮತ್ತು ಶೈಲಿ ಮುಖ್ಯವಾದುದ್ದು. ಅದನ್ನು ಕವಿಯ ಕವನಗಳಲ್ಲಿ ಕಾಣಬಹುದು. ಶೋಷಣೆಯ ವಿರುದ್ಧ ಕವನದ ಭಾಷೆ ಮಾತನಾಡುವುದು ಅಷ್ಟೊಂದು ಸುಲಭದ ಕೆಲಸವಲ್ಲ ಅಂತಹದ್ದನ್ನು ಕವನದ ರೂಪದಲ್ಲಿ ಹೊರ ತಂದಿರುವುದು ಬಂದು ಮೆಚ್ಚುವಂತ ಕಾರ್ಯವೇ ಆಗಿದೆ.

ಸಾವಿರಾರು ನದಿಗಳು ಕವನ ಸಂಕಲನದಲ್ಲಿನ ಭಾಷೆ ಶಿಷ್ಟ ಭಾಷೆಯ ಬಳಕೆ ಸ್ವರೂಪವನ್ನು ಸಾಕಾರಗೊಳಿಸಿದ ಕವಿ ಮುಂದಿನ ಕವನಗಳಲ್ಲಿಯೂ ಹಾಗೆ ಮುಂದುವರಿಸಿದ್ದಾರೆ. ಮೇಲಿನ ಕವನದಲ್ಲಿ ಸಾಲುಗಳಲಿ ಪದಗಳ ಅರ್ಥ ಪದ್ಯದ ಅರ್ಥ ವಾಕ್ಯರಚನೆ, ಪ್ರಾಸ, ಲಯ, ಸ್ವಾರಸ್ಯಕರವಾಗಿದೆ.

ಇಲ್ಲಿನ ಭಾಷೆ ನೋಡಿ ಹಕ್ಕಿಗಳು ಬಾನಿನ ಚುಕ್ಕೆಯಂತೆ ಬಂದರೆ ನಂತರ ಮತ್ತೊಂದು ಎಂಬುವಂತೆ ಸಾಲಿನಲ್ಲಿ ಸಾಗಬೇಕು. ಆದರೆ ಅದರ ಬದಲು ಪ್ರಾಣ ತೆಗೆಯುವ ಹಾದಿಯಲ್ಲಿ ಸಾಗಿದೆ ಎನ್ನುತ್ತಾರೆ.

ಆಕಾಶದಲ್ಲಿ ಹಾರಾಡುವ ಹಕ್ಕಿಗಳೆಲ್ಲಾ ಪ್ರಾಣವನ್ನು ಬಿಡುವಂತಾದರೆ ಭೂಮಿಯ ಮೇಲಿನ ಜನರ ಗತಿ ಏನು ಎಂಬುವುದರ ಸಂಕೇತಗಳ ಮೂಲಕ ದಲಿತರ ಶೋಷಣೆಯನ್ನು ಮೇಲಿನಂತೆ ವ್ಯಕ್ತಪಡಿಸಿದ್ದಾರೆ.

ಕವನಗಳೇ ಮಾತನಾಡುವ ಭಾಷಾ ಶೈಲಿಯನ್ನು ಬಳಸಿಕೊಂಡು ಕಾವ್ಯ ರೂಪಿಸಿದ ಕವಿ ತದನಂತರ ಪರಿಸರದ ಜೊತೆ ಬೆರತು ಪರಿಸರದ ಜೊತೆ ಸಂಭಾಷಣೆ ನಡೆಯುವಂತೆ ಭಾಷಾ ಶೈಲಿಯನ್ನು ಗಮನಿಸಬಹುದು.

*"ಬೆಟ್ಟವ ಹತ್ತಿ ಬೆಟ್ಟವ ಇಳಿಯುವ*

*ಬಾಲಕರಣ್ಣ ನಾವುಗಳು*

*ಆಳ ಪಾತಾಳದ ಕರಾಳ ನೋವನು*

*ಕಂಡರಣ್ಣಾ ನಾವುಗಳು"*[6]

ಕವಿಯ ಮನಸ್ಸು ಬದಲಾಗಿದೆ ಎನ್ನುವಲ್ಲಿ ಸುತ್ತಿ ಬಳಸಿ ಆಕ್ರೋಶದ ಒಳಗಡೆಯಲ್ಲಿ ಮನಸ್ಸು ಕಚ್ಚಿಗೊಳ ಹಿಡುವುದನ್ನು ಕಾಣಬಹುದು.

ಬೆಟ್ಟವ ಹತ್ತಿ ಬೆಟ್ಟವ ಇಳಿಯುವ ಎಂಬ ವಾಕ್ಯದಲ್ಲಿರುವ ಭಾಷೆ ಮೇಲ್ನೋಟಕ್ಕೆ ಸರಳ ಎಂದರೆ ಅರ್ಥ ಅಗಾದವಾದುದು ಅಸಮಾನತೆಯ ಅಂಚಿನಲ್ಲಿರುವವರು ದುಃಖವನ್ನು ತನ್ನ ಮಡಿಲಿಗೆ ಕಟ್ಟಿಕೊಂಡು ಏನು ಅರಿಯದ ಮುಗ್ಧರು ಎಂಬ ಅರ್ಥವನ್ನು ಹೊರ ಸೂಚಿಸಿದ್ದಾರೆ.

ಆಳ ಪಾತಾಳದ ಕರಾಳ ನೋವನ್ನು ಎಂದು ಮತ್ತೆ ಮತ್ತೆ ಉದ್ಗಾರ ವಾಚಕವಾಗಿ ಬಳಸುತ್ತಿದ್ದಾರೆ ಏಕೆಂದರೆ ಅಲ್ಪ-ಸ್ವಲ್ಪ ಕಷ್ಟ ಕಾರ್ಪಣ್ಯಗಳಿಗೆ ಸಿಲುಕಿದವರಲ್ಲಿ ಅದರ ಬದಲಾಗಿ ನೋವೆ ಜೀವನ ಎಂಬ ಸಿದ್ದಿಯಲ್ಲಿ ಬೆಂದವರು ಎಂಬುವುದನ್ನು ಕವಿ ವಾಸ್ತವತೆಯನ್ನು ಕಟ್ಟಿಕೊಡುತ್ತಿದ್ದಾರೆ.

ಇಲ್ಲಿನ ಭಾಷೆ ಓದುಗರ ಮನಸ್ಸನ್ನು ಹಿಂಡುವಂತದು. ಶಿಷ್ಟತೆ, ಪದ ಬದ್ಧತೆ ಮತ್ತು ಬಹುವಚನದ ಭಾಷಾ ಬಳಕೆಯನ್ನು ಗಮನಿಸಬಹುದು.

ಬಲಿಷ್ಟರ ಪಶುಬಲಿಯಾಗಿ ಹೇಗೆ ಜೀವನ ಸಾಗುತ್ತಿಸುತ್ತಿದ್ದರು ಯಾವುದನ್ನು ಈ ಕವನದಲ್ಲಿ ಹೇಳಿದ್ದರೆ.

*"ಎಂಜಲು ತೊಳೆದು ಗಂಜಲ ಬಳಿದು*

*ಗಂಜಿಯ ಕಾಣದೆ ದುಡಿದವರು*

*ಗುಡಿಗೋಪುರದ ಬಣ್ಣಗಳಾಗಿ*

*ಚಳಿಯನು ತಡೆಯದೆ ಕುಸಿದವರು"*[10]

ಎಲ್ಲಾ ಧರ್ಮಗಳಲ್ಲಿಯಾಗಲಿ, ಪುರಾಣಗಳಲ್ಲಿಯಾಗಲಿ ಸಂಪ್ರದಾಯಗಳಲ್ಲಿಯಾಗಲಿ ಕೆಲವನ್ನು ಕೆಳಮಟ್ಟದ ದರ್ಜೆಗೆ ಸೇರಿಸಲಾಗಿದೆ. ಅಂತಹ ಸಂಕೇತವನ್ನು ಕವಿ ಕಾವ್ಯದ ಭಾಷೆಗೆ ಬಳಸಿ ಕೊಂಡಿರುವುದು ಗಮನಾರ್ಹವಾದ ವಿಷಯ.

ಇಲ್ಲಿ ಎಂಜಲು ಎಂಬುವುದು ಕಳಪೆಯನ್ನು ಸೂಚಿಸುವ ಸಂಕೇತ ಅಂತಹ ಕಳಪೆಯನ್ನು ತನ್ನ ಹೊಟ್ಟೆಪಾಡಿಗಾಗಿ, ಜೀವನೋಪಾಯಕ್ಕಾಗಿ 'ಕಾಯಕವೇ ಕೈಲಾಸ' ಎಂಬ ಬಸವಣನವರಣ್ಣನವರ ವಚನವನ್ನು ಎಡ ಬಿಡದೆ ಪಾಲಿಸುತ್ತಿದ್ದೆ ದಲಿತರಿಗೆ ಗಂಜಲವನ್ನು ನೀಡುತ್ತೇದ್ದೆ ಜನತೆಯ ಬಗ್ಗೆ ಹೇಳುವ ಕಾವ್ಯದ ಶೈಲಿ ಸೊಗಸಾಗಿದೆ.

ತಮ್ಮನ್ನು ಗುಡಿ-ಗೋಪುರಗಳ ಹೊದಿಕೆಗಳಾಗಿ ಕಂಡವರು ಅವರಿಗೆ ರಕ್ಷಣೆಗೆಂದು ಏನನ್ನು ನೀಡದವರು ಮುಂದೆ ಏನನ್ನು ನೀಡಲಾರರು. ಮಾಡಿದ್ದು ಉಣ್ಣೋಮಹಾರಾಯ ಎಂಬ ಗಾದೆಯಂತೆ ಇಂದಿಗೂ ಸಹ ಎಲ್ಲಾ ಕಡೆ ತಾಂಡವಾಡುತ್ತಿರುವ ಅಸಮಾನತೆಯನ್ನು ಬಗ್ಗಿಸಲು ಹರಸಾಹಸವೇ ಸಾಕಾಗಿವೆ.

ವಚನಸಾಹಿತ್ಯದಿಂದ ಹಿಡಿದು ಆಧುನಿಕ ಸಾಹಿತ್ಯದವರೆಗೂ ಕೂಡ ಹಲವಾರು ರಕ್ಷಣಾವೇದಿಕೆಗಳಿಂದ ಹಿಡಿದು. ಭಾಷಣಗಳ ಬುಗ್ಗೆಲೆಗಳಂತೂ ಹೆಮ್ಮರವಾಗಿ ಬೆಳೆದು ದಿನಕ್ಕೊಂದು ಎಂಬಂತೆ ಸಾಗಾರೋಪಾದಿಯಲ್ಲಿ ಬೆಳೆದು ರಕ್ಷಣೆಯ ಹಸರಿನಲ್ಲಿ ಮುಕ್ಕಾಲು ಭಾಗದಷ್ಟು ಶೋಷಣೆಯೇ ನಡೆಯುತ್ತಿದೆ ಎಂದರೆ ತಪ್ಪಾಗಲಾರದು.

ಇಂತಹ ನೋವನು ಕಾವ್ಯವಾಗಿ ಮೂಡಿಸಿರುವುದು ನಿಜಕ್ಕೂ ಕವಿಯ ಹಿರಿಮೆಯೇ ಸರಿ ಎಂದೆನಿಸುತ್ತದೆ.

*"ಕುಣಿವ ಸುಂಟರಗಾಳಿ ಬೇಲಿದಾಟಿದ ಹಾವು*
*ಅಲೆವ ಹುಯನ್ ಸದ್ದೆ ಕೇಳಿಸದ್ದು*
*ಹೆಬ್ಬಂಡೆ ಮೇಲಿಂದ ಬಾಡಬಕ್ಕದ ಹೂವು*
*ಬಸವಳಿದು ಬಿದ್ದುದನೆ ಆಲಿಸಿದ್ದು."*[22]

ಕವಿಯ ಕವನಗಳಲ್ಲಿ ಭಾಷೆಗೂ ಮತ್ತು ಶೈಲಿಗೂ ಹಲವು ವ್ಯತ್ಯಾಸಗಳನ್ನು ಅಲ್ಲಲ್ಲಿ ಗಮನಿಸಬೇಕಾಗಿದೆ. ಬರವಣಿಗೆಯ ಭಾಷೆಯ ಬೇರೆ ಬರವಣಿಗೆಯ ಅರ್ಥಪೂರ್ಣ ಶೈಲಿಯೇ ಬೇರೆ ಹೊಸಕವಿತೆಗಳ ಹಾಡು ಸಂಕಲನದಲ್ಲಿನ ಕವಿತೆಗಳ ಭಾಷೆ, ಮತ್ತು ಶೈಲಿ ಎರಡು ಕೂಡ ಕವನದ ಸ್ಫೂರ್ತಿಗಳಾಗಿವೆ.

ಮೇಲಿನ ಕವನದಲ್ಲಿ ಪದಗಳ ಅಂದರೆ ಸೊಗಸಾಗಿದೆ ಕುಣಿವ ಸುಂಟರಗಾಳಿ, ಬೇಲಿದಾಟದ ಹಾವು ಇದರ ಅರ್ಥ ಬಂಧನಕ್ಕೆ ಬಲಿಯಾದವರು ಎಂದು ಹೇಳುವಲ್ಲಿ ಸಫಲತೆಯನ್ನು ತೋರಿಸುತ್ತಿದ್ದಾರೆ ಮತ್ತು ಅಲೆಯುವ ಹುಂಜನ ಸದ್ದನ್ನು ಕೇಳಿಸಿದ್ದೇ ಎಂದರೆ ಪ್ರತಿಧ್ವನಿಯನ್ನು ಸೂಚಿಸುತ್ತದೆ. ಹೆಬ್ಬಂಡೆ ಮೇಲಿಂದ ಬಿದ್ದ ಹೂವು ಆಯುಷವನ್ನು ಆಲಿಸಿದ್ದು ಈ ಎಲ್ಲಾ ಪದಗಳು ಕೂಡ ಶೋಷಣೆ, ದಿಕ್ಕಾರ ಅಸಮಾನತೆ ಇವುಗಳನ್ನು ಕಣ್ಣಿಗೆ ಕಟ್ಟುವಂತೆ ಚಿತ್ರಿಸತೊಡಗಿದ್ದಾರೆ.

ಗ್ರಾಮ್ಯ ಭಾಷೆಗೆ ಪೂರ್ಣ ವಿರಾಮವನ್ನು ಹಾಕಿ ಶಿಷ್ಟ ಭಾಷೆಯೆಡೆಗೆ ಸೌಜನ್ಯದಿಂದ ಸಾಮ್ಯ ಭಾಷೆಯತ್ತ ಸೊಗಸಾಗಿ ಸಾಂದರ್ಭಿಕವಾದ ಅರ್ಥಗರ್ಭಿತವಾದ ವಾಕ್ಯಗಳೊಂದಿಗೆ ಕವನ ಸ್ಫೂರ್ತಿಗೆ ವಾಸ್ತವತೆಯನ್ನು ಕವನ ಸಂಕಲ್ಪಕ್ಕೆ ಇವರ ಭಾಷಾ ಶೈಲಿ ನಾಂದಿಯಾಗಿದೆ ಎನ್ನಬಹುಬಾಗಿದೆ.

ಒಂದೆಡೆ ಕ್ರಾಂತಿಯ ವಿಜಯೋತ್ಸವವನ್ನು ತನ್ನ ಕವನಗಳಿಂದ ಕಂಡ ಕವಿ ಬರವಣಿಗೆಯ ವಿಜಯೋತ್ಸವವನ್ನು ಹೊಸಕವಿತೆಗಳ ಮೂಲಕ ಕಾಣುತ್ತಿದ್ದಾರೆ.

*"ಧಣಿಗಳ ವಿಜಯೋತ್ಸವದಲ್ಲಿ*

*ನಮ್ಮಂಥವರಿಗೇನು ಕೆಲಸ*

*ಹಸು ಮಕ್ಕಳನ್ನು ತುಳಿದಾ ಗುಜ್ಜಾನೆಗಳ*

*ಗುಣಗಾನ ಮಾಡೋಣ*

*ಊರೂರಿಗೆ ಬೆಂಕಿ ಇಟ್ಟು ಲೋಕಕ್ಕೆ ಬೆಳಕಾದವೆಂದು*

*ಬೀಗುವವರನ್ನು ಅಭಿನಂದಿಸೋಣ.*

*ದತ್ತಿ ಬಿಟ್ಟವರನ್ನು ದನಿಯೆತ್ತಿ ಹೊಗಳೋಣ."*[೧೨]

ಅಸಮಾನತೆ ಎಂಬ ಅಜ್ಞಾನವು ದೇಶದಲ್ಲಿ ತಾಂಡವಾಡುತ್ತಿರುವಾಗ ವಿಲಾಸಿ ಜೀವನ ದಾಂಡಿಗರ ಜೊತೆ ಬಲಹೀನರ ಕೆಲಸವೆಲ್ಲಿ ಎಂಬುವುದನ್ನು ಕವಿ ತನ್ನಷ್ಟಕ್ಕೆ ತಾನೆ ಪ್ರಶ್ನೆಯನ್ನು ಕೇಳುತ್ತಿದ್ದರೆ. ಇದು ಪ್ರಶ್ನಾರ್ಥಕ ವಾಕ್ಯರೂಪದಲ್ಲಿದೆ. ಹಾಗೆ ಮುಂದುವರೆದು ಇನ್ನೂ ಪ್ರಪಂಚವನ್ನು ಕಾಣದ ಎಳೆ ಕಂದಮ್ಮಗಳನ್ನು ಬಲಿ ತೆಗೆದುಕೊಂಡು ಕೊಬ್ಬಿನಂತಿರುವ ಮದದಾನೆಗಳನ್ನು ಶೋಷಣೆ ಮಾಡಲ್ಪಟ್ಟವರು) ಗುಣಗಾನ ಮಾಡೋಣ ಎಂದಿದ್ದಾರೆ.

ಸಿಕ್ಕ-ಸಿಕ್ಕವರನ್ನು ಕಾಲಿನ ಕಸದಂತೆ ಕಂಡವರು ಭಾಷಣಗಳೆಂಬ ಅಂಕಾರದಲ್ಲಿ ಮುಳುಗಿದವರನ್ನು ಅಭಿನಂದಿಸುತ್ತಾ ದತ್ತಿ ಬಿಟ್ಟವರನ್ನು ಮೇಲ್‌ಸ್ಥರದಲ್ಲಿ ಹೊಗಳೋಣ ಎನ್ನುತ್ತಾ ಕವಿ ಸಾಮ್ಯತೆಯತ್ತಾ ಸಾಗಿದ್ದಾರೆ.

ಹೊಲೆಮಾದಿಗರ ಹಾಡು ಕವನದಲ್ಲಿ ಬರುವ ಅಲ್ಲೇ ಕುಂತವರು ಕವನದಲ್ಲಿ ಬರುವಂತ ಕವನದಲ್ಲಿ ರೋಷ ಆವೇಶಗಳು ಹೊಸ ಕವಿತೆಗಳು ಕವನಗಳಲಿ ಅಷ್ಟೋಂದು ಕಂಡುಬಂದಿಲ್ಲ ಅದರ ಬದಲು ತಮ್ಮ ತಮ್ಮ ಸಮಸ್ಯೆಗಳಿಗೆ ತಾವೇ ಉತ್ತರವನ್ನು ಕಂಡುಕೊಳ್ಳೋಣ ಎನ್ನುವ ರೀತಿಯಲ್ಲಿ ಸಾಧನೆಯ ದಾರಿ ಒಂದೇ ಗಳಿಗೆ ಸಿಕ್ಕುವುದಿಲ್ಲ ಅದನ್ನು ಪಡೆಯಲು ಯುಗಗಳ ಶ್ರಮ ಎಂಬುವುದನ್ನು ಸಾರಿದ್ದಾರೆ.

ವರ್ಗವ್ಯವಸ್ಥೆಯ ಶೋಷಣೆಯ ಬಲೆಗೆ ಸಿಲುಕಿದ ಇಲ್ಲದವರ ಪಾಡನ್ನು ಈ ಕವಿತೆಯ ಸಾಲುಗಳು ತುಂಬಾ ಅರ್ಥಪೂರ್ಣವಾಗಿ ಕಟ್ಟಿಕೊಟ್ಟಿವೆ. ಇಂತಹ ಅಸಹಾಯಕರ ದನಿಯಾಗಿ ದನಿಯಾಗಿ ಬಂದ ಕಾರ್ಲ್‌ಮಾರ್ಕ್ಸ್ ಇಡೀ ಜೀವನ ವ್ಯವಸ್ಥೆಯನ್ನು ಬದಲಾಯಿಸುವ ಹಾದಿಯಲ್ಲಿ ನಡೆದನು ಅವರ ಬದಲಾವಣೆಯ ಕನಸಿಗೆ ಕನ್ನಡಿ ಹಿಡಿದ ಕವಿ.

*"ತೊಟ್ಟ ಜಂದಿಯ ಕಂಡು ತೇಪೆ ಹಾಕುವ ಬದಲು*
*ಹೊಸ ಬಟ್ಟೆಯ ತರುವ ಕನಸ ಕಂಡೆ*
*ನೊಂದ ಎದೆಯಲಿ ನಗೆಯ ಹೂವ ಅರಳಿಸಲೆಂದು*
*ಹೋರಾಟಗಳ ಕಟ್ಟೆ ಕನವರಿಸಿದೆ."*[೧೨]

ಇಲ್ಲಿನ ಭಾಷೆ ಸರಳವಾದರೂ ಪದಗಳಲ್ಲಿ ಕಾಣುವ ಅರ್ಥ ಅಷ್ಟೇ ರಮ್ಯವಾದುದು. ಇಲ್ಲಿ ಕಾರ್ಲ್‌ಮಾರ್ಕ್ಸ್‌ನ ಜಂದಿಗೆ ತೇಪಯ ಬದಲು ಹೊಸ ಬಟ್ಟೆ ಕೊಡುವ ಕನಸು ಅಂದರೆ 'ಅಸಮಾನತೆಯು ಕಂಡಾಗ ಬರೀ ಕ್ರಾಂತಿ ಮಾಡುವುದಲ್ಲ ಬದಲಾಗಿ ಇಡೀ ಅಸಮಾನತೆಯೇ ತೊಲಗುವಂತೆ ಮಾಡುವುದು ಮಾರ್ಕ್ಸ್‌ನ ಉದ್ದೇಶ' ಆದರೆ ಇದು ಯಶಸ್ವಿಯಾಯಿತೇ ಇಲ್ಲವೋ ಅದು ಬೇರೆ ಪ್ರಶ್ನೆ ಆದರೆ ಇದರಿಂದ ಎಚ್ಚೆತ್ತ ದೀನದಲಿತರೇಷ್ಟೋ ಮಂದಿ.

ಇಂತಹ ಹೋರಾಟದ ಮನೋಭಾವವುಳ್ಳ ಕಾರ್ಲ್‌ಮಾರ್ಕ್ಸ್‌ನ ಕ್ರಾಂತಿಯನ್ನ ಸ್ಪೂರ್ತಿಯಾಗಿ ತೆಗೆದುಕೊಂಡ ಸಿದ್ಧಲಿಂಗಯ್ಯನವರು ತಮ್ಮ ಹೋರಾಟ ಹಾದಿಯಲ್ಲಿ ಅವುಗಳನ್ನು ಕಂಡುಕೊಂಡಿದ್ದಾರೆ. ಅವರೆ ಹೇಳುವ ಹಾಗೆ ಕಪ್ಪು ಕಾಡಿನ ಹಾಡು ಕವಿತೆಯಲ್ಲಿ ಬಂದಿರುವ ಕವನಗಳು ಇದನ್ನು ಪ್ರತಿಬಿಂಬಿಸುತ್ತವೆ.

"ಬಿಗಿದ ಕೋಳಗಳನ್ನು ಕಡಿವೆಸೆವ ಬಿಡುಗಡೆಯ
ನನ್ನ ಕನಸುಗಳಿಂದು ಅರಳುತಿಹವು
ನ್ಯಾಯ ಕೇಳಲು ಹೋರಟ ಜನರ ಮೆರವಣಿಗೆಯಲಿ
ಒಂದು ಮುನ್ನಡೆಸುವುದು ನಿನ್ನ ನೆನಪು"

ಎಂದು ಹೇಳುವಲ್ಲಿ ಕವಿಯು ಮಾರ್ಕ್ಸ್‌ನಿಂದ ಪಡೆದ ಸ್ಫೂರ್ತಿಯು ಒಸ್ನೆಲೆ ಗೊತ್ತಾಗುತ್ತದೆ. 'ಬಿಗಿದ ಕೋಳಗಳನ್ನು ಕಡಿದು ಎಸೆವ ಬಿಡುಗಡೆಯು ನಿನ್ನ ಕನಸುಗಳಿಂದ ಅರಳುತಿಹವು ಎನ್ನುವಲ್ಲಿ ಅಸಮಾನತೆಯ ನೊವುಂಡು ಜನ ಕ್ರಾಂತಿಯಲ್ಲಿ ಮುನ್ನುಗ್ಗಿ ಹೋರಾಟದ ಮನೋಭಾವವನ್ನು ಬೆಳೆಸಿಕೊಂಡಿರುವುದು ತಿಳಿಸು ಬರುತ್ತದೆ.

ಇವರುಗಳ ಜೊತೆಯಲ್ಲೇ ಬೆಂಜಮಿನ್ ಮೊಲಾಯಿಸ್ ಹಾಗೂ ರಾಮಚಂದ್ರಶರ್ಮರ ಸಾಧನೆ ಮತ್ತು ವ್ಯಕ್ತಿತ್ವಗಳನ್ನು ಕವಿ ತಮ್ಮ ಕವನಗಳಲ್ಲಿ ಕಟ್ಟಿ ತೊಟ್ಟಿರುವುದನ್ನ ತಿಳಿಯಬಹುದು.

ಇಲ್ಲಿ ಪ್ರಮುಖವಾಗಿ ಹೇಳಬೇಕಾಗಿರುವುದು ಭಾಷೆಯ ವೈಖರಿಯನ್ನು ಕುರಿತು ಶೋಷಣೆಯ ವಿರುದ್ಧ ಬುಗಿಲೆದ್ದ ಕವಿ ಅನುಕರಣೆಯತ್ತ ಮುನ್ನುಗ್ಗಿದ್ದಾರೆ ಎಂದೆನಿಸುತ್ತದೆ.

ಕವನವೆಂಬ ಕನಸ್ಸುಗಳಲ್ಲಿ ನ್ಯಾಯವೆಂಬ ಮಟ್ಟವನ್ನು ಮುಟ್ಟಲು ಹಾತೊರೆಯಿರುವುದು ಇಲ್ಲಿ ವ್ಯಕ್ತವಾಗುತ್ತದೆ.

ಹಲವು ವಚನಕಾರರ ಭಾಷಾ ಶೈಲಿ ಕೂಡ ಇದೆ ಮಾದರಿಯಲ್ಲಿವೆ. ಭಾವನೆಗಳನ್ನು ಸರಳ ಭಾಷೆಯಲ್ಲಿಯೇ ಸಮಾಜದ ಜನತೆಗೆ ಮನಮುಟ್ಟುವಂತೆ ವಚನಕಾರರು ಶ್ರಮಿಸಿದರೆ ಶೋಷಣೆಯನ್ನು ಮನಗಳಿಗೆ ಮುಟ್ಟುವಂತೆ ಕವಿ ತಮ್ಮ ಕವನಗಳ ಮೂಲಕ ಹೇಳಲು ಯತ್ನಿಸಿದ್ದಾರೆ.

ನಾವು ಹೇಳಲು ಹೋರಟಿರುವುದು ಭಾಷಾ ವೈಶಿಷ್ಟ್ಯತೆಯನ್ನು ಆದುದರಿಂದ ಹೆಚ್ಚಾಗಿ ಅಸಮಾನತೆಯನ್ನು, ಶೋಷನೆಯನ್ನ, ಬಂಡಾಯ, ಎಲ್ಲವನ್ನು ಕಡಿತಗೊಳಿಸಿ ಎಲ್ಲಾ ಭಾವನೆಗಳನ್ನು ಯಾವರೀತಿಯ ಭಾಷಾ ಶೈಲಿಯಿಂದ ಮೂಡಿಸಿದ್ದಾರೆ ಎಂಬುವುದನ್ನು ಮಾತ್ರ ಗಮನಕ್ಕೆ ತೆಗೆದುಕೊಳ್ಳಲಾಗಿದೆ.

## ಅಡಿ ಟಿಪ್ಪಣಿ

೧. ಮೆರವಣಿಗೆ, ಡಾ॥ಸಿದ್ಧಲಿಂಗಯ್ಯ, ಅಂಕಿತಪುಸ್ತಕ, ಬೆಂಗಳೂರು, ೨೦೦೦, ಪು.ಸಂ:೨೫

೨. ಮೆರವಣಿಗೆ, ಡಾ॥ಸಿದ್ಧಲಿಂಗಯ್ಯ, ಅಂಕಿತಪುಸ್ತಕ, ಬೆಂಗಳೂರು, ೨೦೦೦, ಪು.ಸಂ:೨೭

೩. ಮೆರವಣಿಗೆ, ಡಾ॥ಸಿದ್ಧಲಿಂಗಯ್ಯ, ಅಂಕಿತಪುಸ್ತಕ, ಬೆಂಗಳೂರು, ೨೦೦೦, ಪು.ಸಂ:೨೮

೪. ಮೆರವಣಿಗೆ, ಡಾ॥ಸಿದ್ಧಲಿಂಗಯ್ಯ, ಅಂಕಿತಪುಸ್ತಕ, ಬೆಂಗಳೂರು, ೨೦೦೦, ಪು.ಸಂ:೨೯

೫. ಮೆರವಣಿಗೆ, ಡಾ॥ಸಿದ್ಧಲಿಂಗಯ್ಯ, ಅಂಕಿತಪುಸ್ತಕ, ಬೆಂಗಳೂರು, ೨೦೦೦, ಪು.ಸಂ:೩೦

೬. ಮೆರವಣಿಗೆ, ಡಾ॥ಸಿದ್ಧಲಿಂಗಯ್ಯ, ಅಂಕಿತಪುಸ್ತಕ, ಬೆಂಗಳೂರು, ೨೦೦೦, ಪು.ಸಂ:೩೧

೭. ಮೆರವಣಿಗೆ, ಡಾ॥ಸಿದ್ಧಲಿಂಗಯ್ಯ, ಅಂಕಿತಪುಸ್ತಕ, ಬೆಂಗಳೂರು, ೨೦೦೦, ಪು.ಸಂ:೩೩

೮. ಮೆರವಣಿಗೆ, ಡಾ॥ಸಿದ್ಧಲಿಂಗಯ್ಯ, ಅಂಕಿತಪುಸ್ತಕ, ಬೆಂಗಳೂರು, ೨೦೦೦, ಪು.ಸಂ:೩೪

೯. ಮೆರವಣಿಗೆ, ಡಾ॥ಸಿದ್ಧಲಿಂಗಯ್ಯ, ಅಂಕಿತಪುಸ್ತಕ, ಬೆಂಗಳೂರು, ೨೦೦೦, ಪು.ಸಂ:೩೪

೧೦. ಮೆರವಣಿಗೆ, ಡಾ॥ಸಿದ್ಧಲಿಂಗಯ್ಯ, ಅಂಕಿತಪುಸ್ತಕ, ಬೆಂಗಳೂರು, ೨೦೦೦, ಪು.ಸಂ:೩೫

೧೧. ಮೆರವಣಿಗೆ, ಡಾ॥ಸಿದ್ಧಲಿಂಗಯ್ಯ, ಅಂಕಿತಪುಸ್ತಕ, ಬೆಂಗಳೂರು, ೨೦೦೦, ಪು.ಸಂ:೩೬

೧೨. ಮೆರವಣಿಗೆ, ಡಾ॥ಸಿದ್ಧಲಿಂಗಯ್ಯ, ಅಂಕಿತಪುಸ್ತಕ, ಬೆಂಗಳೂರು, ೨೦೦೦, ಪು.ಸಂ:೪೪

೧೩. ಮೆರವಣಿಗೆ, ಡಾ॥ಸಿದ್ಧಲಿಂಗಯ್ಯ, ಅಂಕಿತಪುಸ್ತಕ, ಬೆಂಗಳೂರು, ೨೦೦೦, ಪು.ಸಂ:೪೪

# ಅಧ್ಯಾಯ – ೬

## ಸಿದ್ಧಲಿಂಗಯ್ಯನವರ ಕಾವ್ಯದ ಭಾಷಾ ಬಳಕೆಯನ್ನು ಕುರಿತು

ಮೊದಲಿಗೆ ಕವಿ ಗ್ರಾಮ್ಯ ಭಾಷೆಯನ್ನು ಕಾವ್ಯದ ಭಾಷೆಯನ್ನಾಗಿ ಬಳಸಿಕೊಂಡರು ತದನಂತರ ಕವನಗಳಲ್ಲಿ ಶಿಷ್ಟ ಭಾಷೆಯನ್ನು ತಂದಿರುವುದನ್ನು ಕಾಣಬಹುದು. ಮೊದಲ ಕವನಗಳಲ್ಲಿ ಏಕವಚನ ಅನಾಗರೀಕರು ಬಳಸುವಂತ ಪದಗಳ ರೀತಿಯಲ್ಲಿ ಕವನಗಳನ್ನು ಕಟ್ಟುತ್ತಾರೆ.

ಇಲ್ಲಿ ನಾನು ಉದ್ದೇಶ ಪೂರ್ವಕವಾಗಿ ಅನಾಗರೀಕ ಎಂಬ ಪದವನ್ನು ಬಳಸುತ್ತಿಲ್ಲ ಏಕೇಂದರೆ ಪ್ರಗತಿಶೀಲ ಸಾಹಿತ್ಯದಲ್ಲಿ ಕಾಣಿಸಿಕೊಳ್ಳುವ ಪಿ.ಲಂಕೇಶರವರು ತಮ್ಮ ಸಂಕ್ರಾಂತಿ ನಾಟಕದಲ್ಲಿ ದಲಿತರ ಭಾಷೆಯನ್ನು ಮೇಲ್‌ವರ್ಗದವರು ತಿರಸ್ಕರಿಸಿರುವುದನ್ನು ಎತ್ತಿ ತೋರಿಸಿದ್ದಾರೆ ಆದ ಕಾರಣದಿಂದ ನಾನು ಇಲ್ಲಿ ಅದನ್ನು ಬಳಸಿಕೊಂಡಿದ್ದೇನೆ.

"ಉಷಾ ಮತ್ತು ರುದ್ರರ ನಡುವೆ ಸಂಭಾಷಣೆ ನಡೆಯುವಂತಹ ಸಂದರ್ಭದಲ್ಲಿ ರುದ್ರ ಉಚ್ಚರಿಸುವ ಉಸಾ___"[1] ಎಂಬ ಪದ ಉಷಾಳಲಿಗೆ ಸರಿ ಎನ್ನಿಸುವುದಿಲ್ಲ ಆಗ ಉಷಾ ನಿಮ್ಮ ಶೂದ್ರ ಮುಂಡೆವುಕ್ಕೆ ಸರಿಯಾಗಿ ಭಾಷೆ ತಿಳಿಯಲಿಕ್ಕಿಲ್ಲ ಎನ್ನುತ್ತಾಳೆ. ಅದನ್ನು ಗಮದಲ್ಲಿಟ್ಟುಕೊಂಡು ನಾನು ಇಲ್ಲಿ ಈ ಪದವನ್ನು ಬಳಸಿದ ಎಲ್ಲಾ ಕವನಗಳು ಅದೇ ರೀತಿಯಾದ ಭಾಷೆ ಕಂಡು ಬಂದಿಲ್ಲ. ಮೊದಲಲ್ಲಿ ಬರೆದ ಹೊಲೆಮಾದಿಗರ ಹಾಡು ಕವನಗಳ ಮೊದಲಲ್ಲಿ ಮಾತ್ರ ಈ ರೀತಿಯಾದ ಆಡು ಭಾಷೆ ಇದೆ.

ತದನಂತರದ ಕವನಗಳಲ್ಲಿ ವಿಭಿನ್ನ ನೆಲೆಗಳನ್ನು ಪ್ರಾದೇಶಿಕ ಸಂಸ್ಕೃತಿಯ ಭಾಷೆ ಮತ್ತು ಆಡುಭಾಷೆಯೊಂದಿಗೆ ಶಿಷ್ಟತೆ ಇರುವುದನ್ನು ಮೇಲೆ ಕೊಟ್ಟಿರುವ ಕವನಗಳನ್ನು ಗಮನಿಸಿದರೆ ತಿಳಿಯುತ್ತದೆ.

ಸಿದ್ಧಲಿಂಗಯ್ಯನವರ ಒಟ್ಟಾರೆ ಕಾವ್ಯಗಳ ಭಾಷೆಯನ್ನು ತೆಗೆದುಕೊಂಡಾಗ ಗ್ರಾಮ್ಯ ಮತ್ತು ಶಿಷ್ಟ ಭಾಷೆ ಎರಡನ್ನು ಕಾಣಬಹುದಾಗಿದೆ.

ಸರಳ ಪದ ಬಳಕೆಯನ್ನು ಬಳಸುತ್ತಾ ಒಂದು ವರ್ಗದ ಒಂದು ಸಮುದಾಯದ ವ್ಯಕ್ತಿಯಾಗಿದ್ದು ಕೊಂಡು ಸಮುದಾಯದ ಪ್ರಜ್ಞೆಯನ್ನು ಜನರಲ್ಲಿ ಮೂಡಿಸಲು ತಾವೇ ಭಾವನೆಗಳಿಗೆ ಕಾವ್ಯವೆಂಬ ಭಾಷೆಯನ್ನು ಬಳಸಿರುವುದು ನಿಜಕ್ಕೂ ಸಂತೋಷ ತರುವಂತಹ ವಿಷಯ.

ಒಂದು ವರ್ಗದ ವ್ಯಕ್ತಿಯಾಗಿ ಗುರ್ತಿಸಿಕೊಂಡಿದ್ದಾರೆ. ಮೊದಲ ಕವನಗಳಲ್ಲಿ ಹೆಚ್ಚಾಗಿ ಛಂದಸ್ಸಿನ ಬಳಕೆ ಇಲ್ಲದೆ ಇರಬಹುದು. ನಂತರದ ಕವನಗಳಲ್ಲಿ ಛಂದಸ್ಸಿನ ಬಳಕೆಯನ್ನು ಕಾಣಬಹುದಾಗಿದೆ.

ಇಲ್ಲಿ ಮೂರ್ತ ಮತ್ತು ಅಮೂರ್ತ ಪದಗಳನ್ನು ಬಳಸಿಕೊಂಡಿದ್ದಾರೆ. ಅಂದರೆ ಅಲೋಚನಾ ಪರತೆಯನ್ನು ಎತ್ತಿ ತೋರಿಸುತ್ತಿವೆ ಅವರ ಕವನಗಳು.

ಒರಟು ಭಾಷೆಯಿಂದ ಸೌಮ್ಯ ಭಾಷೆಯತ್ತ ಬರಹಸಾಗಿದೆ. ಕವನಗಳ ಶೈಲಿ ಅವರ ವ್ಯಕ್ತಿತ್ವವನ್ನು ಕುರಿತು ಹೇಳುತ್ತೇವೆ.

ಮೊದ-ಮೊದಲು ಗ್ರಾಮ್ಯ ಭಾಷೆಯೊಂದಿಗೆ ಆಕ್ರೋಶವನ್ನು ವ್ಯಕ್ತ ಪಡಿಸಿದ ಕವಿಕೊನೆಯ ಕವನ ಸಂಕಲನದಲ್ಲಿನ ಕವನಗಳಲ್ಲಿ ಪ್ರತ್ಯೇಕತೆಯನ್ನು ಹೇಳುತ್ತಿದ್ದಾರೆ, ದಲಿತ ವರ್ಗದವರಿಂದ ದೂರವಾಗಿ ಶಿಷ್ಟದೆಡೆಗೆ ಹತ್ತಿರವಾಗುತ್ತಿದ್ದಾರೆ ಎಂದೆನ್ನಿಸುತ್ತದೆ.

ಅವರ ಮೊದಲ ಹೊಲೆಮಾದಿಗರ ಹಾಡು ಕವನಸಂಕಲನವನ್ನು ಬರೆದ ಕವಿ ವಿದ್ಯಾರ್ಥಿಯಾಗಿದ್ದ ಸಂದರ್ಭದಲ್ಲಿ ಬರೆದವರಿಂದ ಅವರ ಪರಿಸರದ ಪರಿಸ್ಥಿತಿಯನ್ನು ತನ್ನ ನೇರ ಭಾಷೆಯಲ್ಲಿ ಕವನಗಳನ್ನು ಬರೆದಿದ್ದಾರೆ ನಂತರ ಬರೆದ ಕವನ ಸಂಕಲಗಳಲ್ಲಿ ವಿದ್ಯಾರ್ಥಿ ಜೀವನದಿಂದ ಹೊರಬಂದ ಮೇಲೆ ಬರೆದಿರುವುದು ಶಿಷ್ಟ ಭಾಷೆ ಎನ್ನಿಸಿಕೊಳ್ಳುತ್ತದೆ.

ಕವಿಗೆ ದಲಿತವರ್ಗದ ವಸ್ತುವೆ ತನ್ನ ಕವನಗಳ ಸಂಕೇತವಾಗಲು ಕಾರಣವೆನಿರಬಹುದುಎಂದರೆ

ಸಿದ್ದಲಿಂಗಯ್ಯನವರ ಕಾವ್ಯಗಳಲ್ಲಿ ದಲಿತರ ಜೀವನ ಸ್ಥಿತಿಯು ಮನಮಿಡಿಯುವಂತೆ ಚಿತ್ರಿತವಾಗಿದೆ. ಶೋಷಿತ ನೆಲೆಯಿಂದ ಬಂದ ಕವಿಗೆ ತನ್ನವರ ಕರಾಳ ಬದುಕಿನ ತೀವ್ರತೆಯನ್ನು ಹೇಳುವ ತೀವ್ರ ತುಡಿತವಿದೆ. ಆದರೆ ಆ ಜನರ ನೋವಿಗೆ ಕಾರಣಗಳನ್ನು ಹುಡುಕುತ್ತಾ ಅವರನ್ನು ಶೋಷಣೆಯ ವಿರುದ್ಧ ಎಚ್ಚರಿಸುತ್ತಾ ತನ್ನ ಕವಿಯ ಮೂಲಕ ಪ್ರತಿಭಟನೆಗೆ ಪ್ರೇರೇಪಿಸುತ್ತಾ ಶೋಷಣೆ ಮಾಡುವವರ ಧಿಮಾಕಿನ ನಡುವಳಿಕೆಯನ್ನು ತಾವೇ ಕವಿತೆಗಳಲ್ಲಿ ದಾಖಲಿಸುತ್ತಾ, ದಲಿತರನ್ನು ಅಧಿಕಾರದೆಡೆಗೆ ಮುನ್ನುಗ್ಗಲು ಪ್ರೇರೇಪಿಸುವುದೇ ಸಿದ್ಧಲಿಂಗಯ್ಯನವರ ಕಾವ್ಯದ ಭಾಷಾ ವೈಶಿಷ್ಟ್ಯ.

ಮೊದಲೆ ಹೇಳುವ ಹಾಗೆ ಸಿದ್ಧಲಿಂಗಯ್ಯನವರು ದಲಿತ ಮಾರ್ಗದಿಂದ ಬಂದವರು. ಅಸಮಾನತೆಯ ನೋವನ್ನು ಶೋಷಣೆಯ ಹಿಂಸೆಯನ್ನು ಅನುಭವಿಸಿದವರು ಕೆಳವರ್ಗದ ಜೀವನದ ದಾರುಣ ಸ್ಥಿತಿಯನ್ನು ಅರಿತವರು. ಕಾಲಿಗೆ ಸರಪಳಿ ಬಿಗಿಸಿಕೊಂಡು ಹೇಲು ತಿನ್ನಿಸಿದರೂ ತಿನ್ನಿಸಿಕೊಂಡು ಜಾತಿ ದಳ್ಳುರಿಯ ಬೆಂಕಿಯಲ್ಲಿ ಬೆಂದು ಅವಮಾನವೀಯ ಕೃತ್ಯಗಳಿಗೆ ಬಲಿಯಾಗಿ, ಅನುಮಾನದ ಸೆರಗನ್ನು ಹೊದ್ದು ಕತ್ತಲೆಯ ಲೋಕದಲ್ಲಿ ಜೀವಿಸುತ್ತಾ ಮೂಕವಾಗಿದ್ದ ಬಾಯಿಗಳಿಗೆ ದನಿಯಾಗಿ ಪ್ರತಿಭಟನೆಯ ಅಸ್ತ್ರವಾಗಿ ನಿಂತವರು. ಇಂತಹ ಕವಿ ತಾನು ಅರಿಸಿಕೊಂಡ ಕಾವ್ಯ ವಸ್ತುವೂ ಸಹ ದಲಿತರ ಜೀವನದ ತಿರುಳನ್ನೇ.

ಸಮಾಜದ ವರ್ಗ ತಾರತಮ್ಯದಿಂದ ಜಾತಿ ತಾರತಮ್ಯದಿಂದ ಕೀಳೆನಿಸಿಕೊಂಡು ಸಾಮಾಜಿಕತೆ, ಆರ್ಥಿಕತೆ, ಅಕ್ಷರತೆ ಮುಂತಾದುವುಗಳಿಂದ ವಂಚಿತರಾಗಿ ಅನಕ್ಷರತೆ, ಅಸಮಾನತೆ, ಅಸ್ಥಿರತೆ ಮುಂತಾದುವುಗಳ ಸುಳಿಗೆ ಸಿಲುಕಿ ಸುಲಿಗೆಗೊಳಗಾಗುತ್ತಾ ಊರ ಹೊರಗೆ ವಾಸಿಸುತ್ತಾ, ಮೇಲ್ವರ್ಗದವರ ಹಿತಾಸಕ್ತಿಗಳಿಗೆ ತಮ್ಮನ್ನು ತಾವೇ ಬಲಿಪಶುಗಳನ್ನಾಗಿಸಿಕೊಂಡು, 'ಜೀತ'ವೆಂಬ ಜಮೀನ್ದಾರಿ ಪದ್ಧತಿಯ ಕ್ರೂರ ವ್ಯವಸ್ಥೆಗೆ ಪ್ರಾಣಿಗಳಂತೆ ಮೈಯೊಡ್ಡಿ, ಅರೆಕೊಳಿಗಾಗಿ ಅರೆಗಳಿಗೆ ನಿಲ್ಲದೆ ದುಡಿಯುವ ದಲಿತರ ಬದುಕಿನ ಹೀನ ಸ್ಥಿತಿ ಕಂಡ ಕವಿ ಅದರ ಬಗ್ಗೆ ಮರುಗುತ್ತಾ 'ನನ್ನ ಜನಗಳು' ಕವನದಲ್ಲಿ ಅದನ್ನ ಅತ್ಯಂತ ಮಾರ್ಮಿಕವಾಗಿ ಎಲ್ಲರ ಹೃದಯ ಕರುಗುವಂತೆ ಚಿತ್ರಿಸಿದ್ದಾರೆ. ಅದುವರೆಗೂ ಯಾವ ಜನಗಳು ಸಾಹಿತ್ಯಕವಾಗಿ ಮತ್ತು ಸಾಂಸ್ಕೃತಿಕವಾಗಿ ಕಡೆಗಣಿಸಲ್ಪಟ್ಟಿದ್ದರೊ ಅವರೆ ಇಂದು ಈ ಕವನದ

ವಾರಸುದಾರರು. ಏಕೆಂದರೆ ಕಡೆಗಣಿಸಲ್ಪಟ್ಟವನಿಂದ ಮಾತ್ರ ಸಾಧ್ಯ ಕಡೆಗಣಿಸಲ್ಪಟ್ಟ ಜನತೆಯ ನೋವು ಮತ್ತು ಅವರ ಆಸೆ ಅಕಾಂಕ್ಷೆಗಳನ್ನು ಸಾರಲು ಅಥವಾ ಮಂಡಿಸಲು ಅವರ ಕವನಗಳ ರೀತಿಯನ್ನು ಗಮನಿಸಿದರೆ ತಿಳಿಯುತ್ತದೆ.

ಕವಿ ತನ್ನ ಸಂಕಲನದ ಕವನಗಳನ್ನು 'ಹಾಡುಗಳು' ಎಂದು ಕರೆದುಕೊಂಡು ಸಿದ್ಧಲಿಂಗಯ್ಯ ಸಂಕಲನದ ಆರಂಭದಲ್ಲಿ "ಇವನ್ನು ಗಟ್ಟಿಯಾಗಿ, ಲಯಬದ್ಧವಾಗಿ ಹಾಡಿದಾಗ, ಓದಿಕೊಂಡಾಗ ಮಾತ್ರ ನನ್ನ ರಚನೆಯ ಉದ್ದೇಶ ಸ್ಪಷ್ಟವಾಗುತ್ತದೆ"[3] ಎಂದಿದ್ದಾರೆ.

ಕವಿಯು ತನ್ನ ಬರವಣಿಗೆಯಲ್ಲಿ ಏಕೆ ಭಿನ್ನತೆ ಇದೆ ಎಂಬುವುದಕ್ಕೆ ಅವರೆ ಮೇಲಿನಂತೆ ಹೇಳಿದ್ದಾರೆ. ಎಂಬುವುದು ಸ್ಪಷ್ಟವಾದ ವಿಷಯವಾಗಿದೆ. ನವ್ಯದ ಅಂತರ್ಮುಖಿ ರಚನೆಗಳನ್ನು ತಿರಸ್ಕರಿಸುವ ಹಠವಿದೆ. ಈ ಹಠದೊಂದಿಗೆ ಹೊಸ ಆಕೃತಿ ಸಿದ್ಧಗೊಳ್ಳುತ್ತಲೆ ಶತಮಾನಗಳಿಂದ ತುಳಿತಕ್ಕೊಳಗಾಗಿದ್ದ ದಲಿತರ ನೋವು, ತಳಮಳ, ಸಿಟ್ಟು-ದುರಂತ ಮೊದಲಾದವುಗಳು ಮೊದಲ ಬಾರಿಗೆ ಸಿಟ್ಟು ಕಾರುತ್ತಾ ಅಕ್ಷರ ಲೋಕವನ್ನು ಪ್ರವೇಶಿಸಿದವು.

ಗಾಂಧೀಜಿ ರಮ್ಯಗೊಳಿಸಿಬಿಟ್ಟಿದ್ದ 'ಹರಿಜನ' ಪದದ ನಿರಾಕರಣೆಯಲ್ಲಿಯೇ ಈ ಸಂಕಲನ ಕ್ರಾಂತಿಯಾಗಿಬಿಟ್ಟಿತು. ದಲಿತರ ದುರಂತಕ್ಕೆ ಕಾರಣವಾಗಿರುವ ವ್ಯವಸ್ಥೆಯ ವಿರುದ್ಧ ಸಿಟ್ಟು ಅದನ್ನು ಧ್ವಂಸ ಮಾಡಿಬಿಡಬೇಕೆಂಬ ಅದಮ್ಯ ಉತ್ಸಾಹ, ತನ್ನವರ ಅಜ್ಞಾನ ಮತ್ತು ಹೆಡ್ಡತನಕ್ಕಾಗಿ ನೋವು-ಬೇಸರ, ದಲಿತರನ್ನು ಸಂಘರ್ಷಕ್ಕೆ ಪ್ರಚೋದಿಸುವ ಬಯಕೆ, ಕ್ರಾಂತಿಯ ಬಗ್ಗೆ ಅಚಲವಾದ ನಂಬಿಕೆ-ಇವೇ ಮುಂತಾದವು ಇವರ ಕಾವ್ಯದ ಪ್ರಧಾನ ಪ್ರೇರಣೆ ಮತ್ತು ವಸ್ತು ಸರ್ವೋದಯದಿಂದ ತನಗೆ ಬೇಕಾದ ಲಯ ವಿನ್ಯಾಸವನ್ನು ಜನಪದ ಸಾಹಿತ್ಯದಿಂದ ಅಗತ್ಯಕ್ಕೆ ಬೇಕಾದಷ್ಟು ಪದ ಸಮುಚ್ಚಯಗಳನ್ನು ತೆಗೆದುಕೊಂಡು ಕವಿ ತಮ್ಮ ಅಭಿವ್ಯಕ್ತಿಗೆ ಕಸುವು ತುಂಬಿಸಿದರು. ದಲಿತರ ಪರಿಸರ ಮತ್ತು ಆ ಪರಿಸರದ ಭಾಷೆಯನ್ನು ತುಂಬಿಸಿದರು. ದಲಿತರ ಪರಿಸರ ಮತ್ತು ಆ ಪರಿಸರದ ಭಾಷೆಯನ್ನು ಉಪಯೋಗಿಸಿಕೊಂಡು ತಮ್ಮದೇ ಆದ ಅಭಿವ್ಯಕ್ತಿ ಮಾರ್ಗವನ್ನು ರೂಢಿಸಿಕೊಂಡರು. ಅದೇ ಸಂಕಲನದ 'ಒಂದು ಪದ' ಹಾಡಿನ ಭಾಗಗಳಿವು.

*“ಇಕ್ರಲಾ ವದೀರ್ಲಾ*
*ಈ ನನ್ನ ಮಕ್ಕಳ ಚರ್ಮ ಎಬ್ರಲಾ*
*ದೇವ್ರು ಒಬ್ನೇ ಅಂತಾರೆ*
*ಓಣಿಗೊಂದೊಂದು ತರಾ ಗುಡಿ ಕಟ್ಸವೆ,”*[೩]

ತಪ್ಪು ಮಾಡಿದವರ ಮುಖಕ್ಕೆ ರಾಚುವ ಈ ಕವನ ಅದೇ ಕ್ಷಣದಲ್ಲಿ ದಲಿತರ ಸ್ವಾಭಿಮಾನವನ್ನು ಎಚ್ಚರಿಸುತ್ತದೆ. ಈ ಹಂತದಲ್ಲಿ ಕವಿಯವರು ಸಾಂಪ್ರದಾಯಿಕ ಭಾರತೀಯ ಕಾವ್ಯಮೀಮಾಂಸೆ ಪ್ರತಿಪಾದಿಸುವ ಕುಸುರಿಗೆಲಸ, ನಾಜೂಕುತನವನ್ನು ತಿರಸ್ಕರಿಸಿ, ಆಗಾಧವಾದ ಚೈತನ್ಯವುಳ್ಳ ಹೊಸ ಉಪಮೆ, ರೂಪಕ, ಪ್ರತಿಮೆಗಳನ್ನು ಕಾವ್ಯದಲ್ಲಿ ಬಳಸಿದರು.

*“ನನ್ ಮೇಲೆ ನಿಂತ್ಕಂಡ್ ಕುಳೀತಿರೋ ಈ ಬಂಗ್ಲಿ,*
*ಕೈಲೀಕ ಬೀಳಂಗೆ*
*ಸೌದೆ ಸಿಗದಂಗ್ ಸಿಗಿತೀನಿ, ಸಾವ್ಕಾರಿ ಮಯ್ಯ,*
*ಸುಳ್ಳು ಪಚ್ಚೆ ಬಿಗಿತೀನಿ, ಕುಟ್ತನಿ”*[೪]

ಸಮಕಾಲೀನ ಜಗತ್ತೂ ಇಂತಹ ಸಾಲುಗಳಿಂದ ಬೆಚ್ಚಿ ಬಿದ್ದದ್ದಂತೂ ಸತ್ಯ. ದಲಿತರ ವಾಸ್ತವ ಸ್ಥಿತಿಯನ್ನು ಹೇಳುವಾಗ ಮೇಲಿನಂತೆ ಬರೆಯುವ ಕವಿ ಒಟ್ಟಾರೆ ಜನ ವರ್ಗವನ್ನು ಕುರಿತು ಬರೆಯುವಾಗ ಶಿಷ್ಟ ಕನ್ನಡವನ್ನು ಬಳಸುತ್ತಾರೆ.

*“ಬಡ್ಡಿಯನ್ನು ತೆತ್ತೋರು ಭಾಷಣಗಳ ಬೆಂಕಿಯಲ್ಲಿ*
*ಬೆಂದು ಬೂದಿಯಾದೋರು ನನ್ನ ಜನಗಳು”*[೫]

ಹೀಗೆ “ಹೊಲೆಮಾದಿಗರ ಹಾಡು ಸಂಕಲನವು ಸಮಕಾಲೀನ ಕನ್ನಡ ಕಾವ್ಯ ಶರೀರಕ್ಕೆ ಹೊಸ ರಕ್ತದ ಭಾಷ್ಯೆ ಬರೆಯಿತು. ಈ ಕವಿಯ ಎರಡನೆ ಕವನ ಸಂಕಲನ “ಸಾವಿರಾರು ನದಿಗಳು” ಇದರಲ್ಲಿ ಮೊದಲನೇ ಸಂಕಲನದ ಮಿತಿಗಳನ್ನು ಮೀರಿದ ಉತ್ತಮ ಕವನಗಳಿವೆ, ಅಭಿವ್ಯಕ್ತಿ ಮತ್ತು ತಾತ್ವಿಕತೆಯ ನಡುವೆ ಸೃಜನಾತ್ಮಕ ಸಾಮರಸ್ಯ ಸಾಧಿಸಿದ ಕೆಲವು ಅಪೂರ್ವ ಮತ್ತು ಮಹತ್ವ ರಚನೆಗಳಿವೆ.

ಇಲ್ಲಿನ ವಿಸ್ಮಯಕಾರೀ ಸಾಲುಗಳಲ್ಲಿ ಭಾವ, ಛಂದಸ್ಸು, ಪ್ರತಿಮೆಗಳೆಲ್ಲವೂ ಹೊಚ್ಚಹೊಸದಾಗಿ ಕಂಗೊಳಿಸುತ್ತವೆ, ಕವನದ ಮಧ್ಯಭಾಗದಲ್ಲಿ ಬರುವ "ನನ್ನ ಜನ ನೀರಿನಂತೆ ನಿಂತರು" ಎಂಬ ಸಾಲುಗಳಲ್ಲಿ ಪ್ರಕಟವಾಗುವ ಜಾತ್ಯತೀತತೆ, ಸಮಾನತೆಯ ಭಾವವನ್ನು ಎಚ್ಚರದಿಂದ ಪರಿಶೀಲಿಸಬೇಕು, 'ನೀರು' ಸಮಾನತೆಯ ಸಂಕೇತವಾಗಿ ಬಂದು ಮೂಲಕ ನಾಳಿನ ಕನಸನ್ನು ನಿನ್ನೆಯ ವಾಸ್ತವವೆಂಬಂತೆ ಬಣ್ಣಿಸಿದ ಈ ಕವನ ದಲಿತರ ಸೃಜನಶೀಲ ಸಾಮರ್ಥ್ಯದ ಅತ್ಯುತ್ತಮ ಪ್ರತಿನಿಧಿ.

ಈ ಸಂಕಲನದಲ್ಲಿ ಇರುವ 'ಬೆಲ್ಜಿಯ ಹಾಡು' 'ಕೆಂಪು ಸೂರ್ಯ' 'ದಲಿತರು ಬರುವರು' ಬಿದ್ದವು ಮನೆಗಳು' 'ಕಂಡೆ ನನ್ನವಳ ಒಂದು ದಿವಸ' ಕವನಗಳು ತಮ್ಮೊಡಲಿನ ಶಕ್ತಿ ಸಾಮರ್ಥ್ಯಗಳಿಂದಾಗಿ ಮಹತ್ವದಾಗುತ್ತವೆ. 'ಅಲ್ಲೆ ಕುಂತವರೆ' ಖಂಡಕಾವ್ಯವಾದರು ಕವಿಯ ಒಟ್ಟು ಆಕ್ರೋಶ ಮತ್ತು ವಿಷಾದವನ್ನು ಮಹಾಕಾವ್ಯದ ಮಾದರಿಯಲ್ಲಿ ದಾಖಲಿಸಿಲ್ಲ. ಆ ಖಂಡಕಾವ್ಯದ ಅಲ್ಲಲ್ಲಿ ಕಾವ್ಯ ಖಡ್ಗದಂತೆ ಮಿಂಚುವುದುಂಟು.

ಕವಿಯ ಮೂರನೆಯ ಕವನ ಸಂಕಲನವೆಂದರೆ "ಕಪ್ಪು ಕಾಡಿನ ಹಾಡು" ಈ ಸಂಕಲದಲ್ಲಿ ಆಕ್ರೋಶ, ಆವೇಶಗಳಿಂದ ಪೂರ್ಣ ಪಾರಾದ ಕವನಗಳಿವೆ. ಆದರೆ ಅವಕ್ಕೆ ಪರ್ಯಾಯವಾಗಿ ಅಷ್ಟೇ ಗಟ್ಟಿಯಾದ ಬೇರೇನನ್ನೋ ಕೊಡಲು ಕವಿಗೆ ಸಾಧ್ಯವಾಗಿಲ್ಲ.

*ಜಾತಿ-ಜಾತಿಯ ನಡುವೆ*

*ನಿಂತ ಸಾಗರದಲ್ಲಿ*

*ನಮ್ಮ ಪ್ರೀತಿಯ ಹಡಗು ಮುಳುಗಿತಲ್ಲೇ*

ಎಂಬ ವಾಚ್ಯ-ಗದ್ಯ ಮಿಶ್ರಿತ ಪಾದಗಳು ಹೆಚ್ಚು ಕಾಣಿಸಿಕೊಂಡಿವೆ ಬಹುಶಃ ಕವಿಯಾಗಿ ಸಿದ್ಧಲಿಂಗಯ್ಯನವರ ಸಾಧನೆ ಮುಗಿದಿದ್ದನ್ನು ಸಾರುವ ಕವನ ಸಂಕಲನವಿದು. ಇದರಿಂದಾಚೆಗೆ ಬೆಳೆಯಬಹುದಾದ ಯಾವ ಸಾದ್ಯತೆಗಳನ್ನೂ ಕವಿ ಇಲ್ಲಿ ತೋರಿಸಿಲ್ಲ.

ಕವಿಯ ಕೊನೆಯ ಕವನ ಸಂಕಲನ "ಹೊಸಕವಿತೆಗಳ ಹಾಡು" ಸಂಕಲನವೆಂದರೆ ಕವಿಯ ಸಂವೇದನೆ ಈಚೆಗೆ ಬೇರೆ ದಿಕ್ಕುಗಳತ್ತ ಹೊರಳತೊಡಗಿದೆ. ಮೊದಲಿಗೆ ತಮ್ಮ ಸಾಹಿತ್ಯ ಸಂಕಲ್ಪದ ಮೂಲಕ ರಾಜಕೀಯ ಜನಾಂಗವನ್ನು ಈಗ ಮತ್ತೆ ತಮ್ಮ ಪ್ರತಿಭಾ ವಿಲಾಸೆಯಲ್ಲಿ ಕವಿ ಕಾಣುತ್ತಿರುವ ಆದರೆ ಅದು ಹೊಸ ಬಗೆಯ ಸಾಂಸ್ಕೃತಿಕ ರಾಜಕಾರಣದ್ದೇ ಸರಳ ಆಕ್ರೋಶ ಆಕಾಂಕ್ಷೆಗಳ ಲಯಗಳಿಂದ ಹೆಚ್ಚು ಬಹು ಮುಖಿಯಾದ ದಲಿತ ಸಮಷ್ಟಿಯ ಸೃಷ್ಟಿ ಕವಿಯ ಕಮ್ಮಟದಲ್ಲಿ ನಡೆಯತೊಡಗಿದೆ. ದಲಿತರ ದೇವಾನುದೇವಿಯರು ಈ ದೇವರುಗಳು ಎಂಬ ಪದ್ಯ ಈ ಬಗೆಯದು.

*"ಸಂಸ್ಕೃತ ತಿಳಿಯದ ಸ್ವರ್ಗದಲಿ ನೆಲೆಸದ*
*ಕಪ್ಪು ದೇವತೆಗಳು ಬರಿಗಾಲಿನವರು*
*ಬೆರಗೆ ಸಿರಿಯಾಗಿದ್ದ ನಮ್ಮ ಹಿರಿಯರ ಕನಸು*
*ಮೈಯ್ಯೋಗಿ ನಮ್ಮೊಡನೆ ಬಾಳುವರು."*[೬]

ಈ ಸಾಲುಗಳಲ್ಲಿ ಅನುಭವ ಹೆಚ್ಚು ಆಕರ್ಷಕವಾಗಿ ಸೂಕ್ಷ್ಮವಾಗಿ ಪ್ರಬಲವಾಗಿರುವುದು ಕಂಡು ಬರುತ್ತದೆ.

ಒಟ್ಟಾರೆಯಾಗಿ ಕವಿಯ ಎಲ್ಲಾ ಕವನಗಳಲ್ಲಿ ಆಡುಭಾಷೆ ಮತ್ತು ಶಿಷ್ಟ ಭಾಷೆ ಎರಡು ಕಂಡು ಬರುತ್ತವೆ. ಇದರಲ್ಲಿ ಪ್ರಮುಖವಾಗಿ ತಿಳಿಯುವುದು ಏನೆಂದರೆ ಕವಿಯ ವ್ಯಕ್ತಿತ್ವಕ್ಕೂ ಕವಿತೆಗಳಿಗೂ ಇರುವ ವ್ಯತ್ಯಾಸ ತಿಳಿದುಬರುತ್ತದೆ.

ದಲಿತ ಸಾಹಿತ್ಯದ ಉಗಮವನ್ನು ಸಾರಿದ್ದು ಸಣ್ಣ ಕತೆಗಳಾದರೂ, ಜೊತೆಗೆ ಸಿದ್ಧಲಿಂಗಯ್ಯನವರಿಗಿಂತ ಅನೇಕರು ಬರೆದಿದ್ದಾರೆ. ಆದರೆ ಆ ಸಾಹಿತ್ಯದ ಪ್ರಕಾರಗಳಲ್ಲಿ ತುಂಬ ಜನಪ್ರಿಯವಾದದ್ದು ಕಾವ್ಯವೇ ಈ ಕಾವ್ಯಪ್ರಕಾರ ಸ್ಫೋಟಿಸಿದ್ದು ಸಿದ್ಧಲಿಂಗಯ್ಯನವರ ಹೊಲೆಮಾದಿಗರ ಹಾಡುದೊಡನೆ ಎಂಬುವುದನ್ನು ಮರೆಯುವಂತಿಲ್ಲ. ಆದುದರಿಂದ ದಲಿತ ಸಾಹಿತ್ಯಕ್ಕೆ ಕವಿಯು ಒಂದು ಕೊಡುಗೆಯಾಗಿದ್ದಾರೆ ಎಂಬುದು ಒಂದು ಸ್ಮರಣೆಯ ಎಂದು ಹೇಳಬಹುದು.

# ಅಡಿ ಟಿಪ್ಪಣಿ

೧. ಸಂಕ್ರಾಂತಿ, ಪಿ.ಲಂಕೇಸ್, ಲಂಕೇಸ್ ಪ್ರಕಾಶನ, ಬೆಂಗಳೂರು, ೨೦೦೦, ಪು.ಸಂ:೧೮

೨. ಬಂಡಾಯ ದಲಿತ ಸಾಹಿತ್ಯ, ಡಾ||ಪುರುಷೋತ್ತಮ ಬಿಳಿಮಳೆ, ವಿ.ಎಸ್.ಮಲ್ಲಿಕಾರ್ಜುನ ಸ್ವಾಮಿ, ಕರ್ನಾಟಕ ಸಾಹಿತ್ಯ ಅಕಾಡೆಮಿ, ಕನ್ನಡ ಭವನ, ಬೆಂಗಳೂರು, ೧೯೯೦, ಪು.ಸಂ:೩೮

೩. ಮೆರವಣಿಗೆ, ಡಾ||ಸಿದ್ಧಲಿಂಗಯ್ಯ, ಅಂಕಿತಪುಸ್ತಕ, ಬೆಂಗಳೂರು, ೨೦೦೦, ಪು.ಸಂ:೫೯

೪. ಮೆರವಣಿಗೆ, ಡಾ||ಸಿದ್ಧಲಿಂಗಯ್ಯ, ಅಂಕಿತಪುಸ್ತಕ, ಬೆಂಗಳೂರು, ೨೦೦೦, ಪು.ಸಂ:೫೮

೫. ಮೆರವಣಿಗೆ, ಡಾ||ಸಿದ್ಧಲಿಂಗಯ್ಯ, ಅಂಕಿತಪುಸ್ತಕ, ಬೆಂಗಳೂರು, ೨೦೦೦, ಪು.ಸಂ:೫೭

೬. ಮೆರವಣಿಗೆ, ಡಾ||ಸಿದ್ಧಲಿಂಗಯ್ಯ, ಅಂಕಿತಪುಸ್ತಕ, ಬೆಂಗಳೂರು, ೨೦೦೦, ಪು.ಸಂ:೪೯

# ಉಪಸಂಹಾರ:

ಸಿದ್ಧಲಿಂಗಯ್ಯನವರ ಭಾಷಾ ಶೈಲಿ ದಲಿತರನ್ನು ಒಳಗೊಂಡತಹ ಭಾಷೆ, ಓದುಗರ ಮನಸ್ಸನ್ನು ಸೂಕ್ಷ್ಮವಾಗಿ ಕಲುಕುವಂತೆ ಭಾಷೆಯನ್ನು ಮೈಗೂಡಿಸಿಕೊಂಡಿದ್ದಾರೆ. ಕರ್ನಾಟಕದಲ್ಲಿ ಕ್ರಾಂತಿಯ ಕನ್ಯೆಗೆ ದಲಿತ ಹೂಗಳನ್ನು ಮುಡಿಸಿದ ಸಿದ್ಧಲಿಂಗಯ್ಯನವರು ಎಪ್ಪತ್ತರ ದಶಕದಲ್ಲಿ ಅಸಮಾನತೆಯ ವಿರುದ್ಧ ಬಿರುಗಾಳಿಯನ್ನೇ ಎಬ್ಬಿಸಿದರು, ಅವರ ನೇರ ನುಡಿಗಳೋ ಆಕ್ರೋಶದ ಕಿಡಿಗಳು. ತಿಳಿಯಾದ ಭಾಷೆಯಲ್ಲಿ ಬರೆದಿದ್ದಾರೆ. ತನ್ನದೇ ಶ್ರೇಷ್ಠವೆಂಬ ಅಹಂನಿಂದ ಗರ್ಭಗುಡಿ ಸಂಸ್ಕೃತಿಯು ಯಾವುದನ್ನು ಕೊಳಕುಜನ, ಕೊಳಕುಭಾಷೆ, ಕೊಳಕು ಸಂಸ್ಕೃತಿ ಎಂದು ತಿರಸ್ಕಾರ ದೃಷ್ಠಿಯಿಂದ ನೋಡುತ್ತಿತ್ತೋ ಅದನ್ನೇ ತನ್ನ ಕಾವ್ಯದ ವಸ್ತುವಾಗಿ ಮಾಡಿಕೊಂಡಂತಹ ಕವಿ ಸಮಾನತೆಯ ಸ್ವಾತಂತ್ರ್ಯಕ್ಕಾಗಿ ಸಂಘಟನಾತ್ಮಕ ದೃಷ್ಟಿಕೋನವನ್ನು ಬೆಳೆಸಿಕೊಂಡವರು ಮತ್ತು ದಲಿತರಲ್ಲಿ ಈ ಭಾವನೆ ಬೆಳೆಸುವುದರ ಮೂಲಕವಾಗಿ ಹೋರಾಟಕ್ಕೆ ಇಳಿದವರು.

ದಲಿತರಿಗೆ ಅಧಿಕಾರದ ಗದ್ದುಗೆ ಎಷ್ಟು ಅವಶ್ಯಕ ಎಂಬುದನ್ನು ತಾವು ಎಂ.ಎಲ್.ಸಿ ಆಗುವುದರ ಮೂಲಕ ತೋರಿಸಿಕೊಟ್ಟವರು. ಬುದ್ಧ, ಅಂಬೇಡ್ಕರ್ ಮಾರ್ಕ್ಸ್ ಮುಂತಾದ ಮಹಾನುಭಾವರುಗಳಿಂದ ಪ್ರೇರಣೆಯನ್ನು ಪಡೆದಂತಹ ಸಿದ್ಧಲಿಂಗಯ್ಯನವರು ತಮ್ಮ ಕ್ರಾಂತಿ ಕವನಗಳನ್ನ ಹಾಡುವುದರ ಮೂಲಕ ವಾಗೇ ಅನೇಕ ದಲಿತರನ್ನ ಹೋರಾಟದ ಹಾದಿಗೆ ಎಳೆದವರು ಮತ್ತು ಸ್ವಾಭಿಮಾನದ ನೆಲೆಯನ್ನು ತೋರಿಸಿಕೊಟ್ಟವರು.

ಪರಿಸ್ಥಿತಿಯ ಒತ್ತಡವನ್ನೇ ಕಾವ್ಯವಾಗಿ ಮೂಡಿಸಿ ಉತ್ಪ್ರೇಕ್ಷೆಯ ರೂಪದಲ್ಲಿ ಕಾವ್ಯಗಳನ್ನು ತನ್ನದೇ ಆದ ಭಾಷಾ ಶೈಲಿಯಲ್ಲಿ ಅಂದಗೊಳಿಸಿದ್ದಾರೆ.

# ಗ್ರಂಥಋಣ


೧. ಮೂಕನಿಗೆ ಬಾಯಿ ಬಂದಾಗ, **ಅರವಿಂದ ಮಾಲಗತ್ತಿ,** ಶೈಲ ಪ್ರಕಾಶನ, ವಿಜಾಪುರ. ೧೯೮೧.

೨. ಸಂಸ್ಕೃತಿ ಕಥನ, **ಅಗ್ರಹಾರ ಕೃಷ್ಣಮೂರ್ತಿ,** ಸುವರ್ಣ ಕರ್ನಾಟಕ ಸಂದರ್ಭದಲ್ಲಿ ಕರ್ನಾಟಕ ಸರ್ಕಾರದ ಪರವಾಗಿ ಕೆ.ಆರ್.ನಿರಂಜನ, ಆಯುಕ್ತರು, ಕನ್ನಡ ಮತ್ತು ಸಂಸ್ಕೃತಿ ಇಲಾಖೆ, ೨೦೦೬.

೩. ಕನ್ನಡ ದಲಿತ ಸಾಹಿತ್ಯ, **ಡಾ|| ಅರ್ಜುನ ಗೊಳಸಂಗಿ (ಸಂ),** ವಿ.ಎನ್. ಮಲ್ಲಿಕಾರ್ಜುನ ಸ್ವಾಮಿ, ರಿಜಿಸ್ಟ್ರಾರ್, ಕರ್ನಾಟಕ ಸಾಹಿತ್ಯ ಅಕಾಡೆಮಿ, ಕನ್ನಡ, ಭವನ, ಜೆ.ಸಿ.ರಸ್ತೆ, ಬೆಂಗಳೂರು, ೨೦೦೩.

೪. ಮೆರವಣಿಗೆ, **ಡಾ|| ಸಿದ್ಧಲಿಂಗಯ್ಯ,** ಅಂಕಿತಪುಸ್ತಕ, ೫೩, ಶ್ಯಾಮಸಿಂಗ್ ಕಾಂಪ್ಲೆಕ್ಸ್, ಗಾಂಧಿಬಜಾರ್ ಮುಖ್ಯರಸ್ತೆ, ಬೆಂಗಳೂರು, ೨೦೦೦.

೫. ಬಡವರ ನಗುವಿನ ಶಕ್ತಿ, **ಎಸ್.ದಂಡಪ್ಪ,** ಅಂಕಿತ ಪುಸ್ತಕ, ೫೩, ಶ್ಯಾಮಸಿಂಗ್ ಕಾಂಪ್ಲೆಕ್ಸ್, ಗಾಂಧಿಬಜಾರ್, ಮುಖ್ಯರಸ್ತೆ, ಬಸವನಗುಡಿ, ಬೆಂಗಳೂರು, ೨೦೦೧.

೬. ಅನುಸಂಧಾನದ ಹೊಸದಾರಿ, **ಡಾ|| ಕೆ.ಆರ್.ದುರ್ಗಾದಾಸ್,** ಅನುಸಂಧಾನದ ಹೊಸದಾರಿ, ಸಮತಾ ಪ್ರಕಾಶನ, ಪಾವಟಿನಗರ ಧಾರವಾಡ, ೨೦೦೦.

೭. ಅನಿಕೇತನ, **ಪ್ರೊ|| ದೊಡ್ಡರಂಗೇಗೌಡ (ಸಂ),** ಟಿ.ಎಸ್.ದಕ್ಷಿಣಾಮೂರ್ತಿ, ಕರ್ನಾಟಕ ಸಾಹಿತ್ಯ ಅಕಾಡೆಮಿ, ಕನ್ನಡ ಭವನ ಜೆ.ಸಿ.ರಸ್ತೆ, ಬೆಂಗಳೂರು, ೨೦೦೦.

೮. ಸಂಕ್ರಾಂತಿ, **ಪಿ.ಲಂಕೇಶ್,** ಲಂಕೇಶ ಪ್ರಕಾಶನ, ನಂ.೯, ಪೂರ್ವ ಆಂಜನೇಯ ಗುಡಿ ರಸ್ತೆ, ಬಸವನಗುಡಿ. ಬೆಂಗಳೂರು,೨೦೦೦.

೯. ದಲಿತ ಚಳವಳಿ ಒಂದು ಅವಲೋಕನ, **ಡಾ|| ವಿ.ಮುನಿವೆಂಕಟಪ್ಪ (ಸಂ)**, ವಿಚಾರವಾದಿ ಪ್ರಕಾಶನ, ೧೨೪೦, ೩ನೇ ಕ್ರಾಸ್, ಗಂಗರಸ್ತೆ, ಕುವೆಂಪುನಗರ ಮೈಸೂರು, ೧೯೯೮.

೧೦. ಬಂಡಾಯ ದಲಿತ ಸಾಹಿತ್ಯ, **ಡಾ|| ಪುರುಷೋತ್ತಮಬಿಳಿಮಲೆ**, ವಿ.ಎನ್.ಮಲ್ಲಿಕಾರ್ಜುನ ಸ್ವಾಮಿ, ರಿಜಿಸ್ಟ್ರಾರ್, ಕರ್ನಾಟಕ ಸಾಹಿತ್ಯ ಅಕಾಡೆಮಿ, ಕನ್ನಡ ಭವನ ಜಿ.ಸಿ.ರಸ್ತೆ, ಬೆಂಗಳೂರು, ೧೯೯೦.

೧೧. ಸಾಹಿತ್ಯ ವಿಮರ್ಶೆ, **ಡಾ|| ರಹಮತ್ ತರೀಕರ್ (ಸಂ)**, ಮಲ್ಲೇಪುರಂ.ಜಿ.ವೆಂಕಟೇಶ್, ನಿರ್ದೇಶಕರು, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ ಹಂಪಿ, ೧೯೯೩.

೧೨. ಗಂಗಾವತರಣ, **ಡಾ|| ಕೆ.ಎಸ್.ಶರ್ಮ**, ಶರ್ಮಾ ಪ್ರಕಾಸನ, ೪, ಪತ್ರಕರ್ತರ ಕಾಲೋನಿ, ಹುಬ್ಬಳ್ಳಿ, ೨೦೦೧.

